# ಕರ್ನಾಟಕ ಮಾಲತೀ-ಮಾಧವ.

## ೧ನೆಯ ಅಂಕ.

### ಈಶಸ್ತವನ.

|| ಉತ್ಪಲಮಾಲಾ ||

ಶ್ರೀಗುರು ಪಾದಪದ್ಮ ಯುಗಲಂಗಳೊಳಾಂ ಮಣಿಯುತ್ತೆ ಭಕ್ತಿಯಿಂ ।
ದೀಗುರು ಗ್ರಂಥವಂ ಹರನ ಪ್ರೇರಣೆಯಿಂ ನೆರೆನಂಬುತಾ ಮಹಾ ।
ಯೋಗಿಯನೀಗ ಕನ್ನಡದಿ ಪದ್ಯಗಳಂ ಬೆರಿಸುತ್ತೆ ಲೇಖಿಸಲ್ ।
ಶ್ರೀಗಜವಕ್ತ್ರ ಶಾರದೆಯನೀವುದು ಪ್ರೇಮದೊಳಾಶಿಷಂಗಳಂ || ೧ ||

|| ಶಾರ್ದೂಲವಿ ||

ನಂದೀಶಂ ಹರನಾಟ್ಯದೊಳ್ ಡಮರುವನ್ನಾನಂದದಿಂ ಬಾರಿಸಲ್ ।
ಬಂದಿರ್ದಂ ಕರಿಸಿರ್ದನೋಲ್ ಶರಜವಾಹಂ, ಸೋಗೆಯಿಂ ನೋಡಿನಾ ।
ಗಂದಾಂಟಲ್ ಸರಿಯುತ್ತೆ ನಿನ್ನೊರಳೆಯೊಳ್ ನೀಗಂಡವಲ್ಲಾಡಿಸಲ್ ।
ನೊಂದಿರ್ದಾಲಿಗಳೇಳೆ ಚೀತ್ಕರಿಪನೇ ವಿಘ್ನೇಶನೇ ರಕ್ಷಿಸು || ೨ ||

...ಸುತ್ತೆ—

|| ಉತ್ಪಲಮಾಲಾ ||

ಕಂತುಹರೋತ್ತಮಾಂಗಜಟದೊಳ್ ಪುಡಿಯಾಗುವಗಂಗೆಯೂರ್ಮಿಗಳ್ ।
ಜಂತದ ಪಂಕ್ತಿಯಲ್ಲಿ ಸುರಿಯುತ್ತೆ ಕಲಾಟದ ಶಬ್ದದಿಂದೆಮ ।
ತ್ತಂ ತಲೆದೋರಿ ನಾಸಿಕದ ಕರ್ಣದ ನೇತ್ರದ ಹೋರಿನಲ್ಲಿಯಾ ।
ವರ್ತಿಸಿ ತುಂಬಿ ಬೊಮ್ಮನ ಕಪಾಲವ-ನೆಮ್ಮನು ಕಾಯಲಾನಗಂ || ೩ ||

( ನಾಂದಿಯ ನಂತರ )

ಸೂತ್ರಧಾರ— ಈ ಜಗತ್ತೆಂಬ ನಡುಗಡ್ಡೆಗೆ ದೀಪದಂತಿರುವ ಶ್ರೀದಿನಕರನ ಉದಯವಾದಂತಾಯಿತು.

( ನಮಸ್ಕಾರ ಮಾಡಿ )

॥ ಚಂಪಕ ॥

ಜಗದೊಳಗೆಲ್ಲ ಮಂಗಲಕೆ ತಾಣನೆ ವಿಶ್ವದ ಜೀವಮೂರ್ತಿಯೇ ।
ಮಗಯಿಪ ಲಕ್ಷ್ಮಿಯನ್ನೊಲಿದು ನನ್ನೊಳಗೀವುದು ತೇಜರಾಸಿಯೇ ।
ಮುಗುಧನ ನಮ್ರ ಸೇವಕನ ಪಾಪವ ನೀತೊಳೆ ಮತ್ತೆನನ್ನೊಳೀ ।
ಗಗಣಿತ ಮಂಗಲಂಗಳನು ನೀದಯಪಾಲಿಸು ಸೂರ್ಯದೇವನೇ ॥ ೪

( ಪಡದೆಯಕಡೆಗೆ ಮೋರೆಮಾಡಿ ನೋಡಿ )

ಎಲ್ಯೆ ಮಾರಿಷಾ, ರಂಗಭೂಮಿಯು ಸಿದ್ಧತೆಯಾಗಿದೆ. ಶ್ರೀ ಕಾಲಪ್ರಿಯ ನಾಥನ ಯಾತ್ರೆಯ ನಿಮಿತ್ತವಾಗಿ ಬೇರೆಬೇರೆ ದಿಕ್ಕುಗಳಲ್ಲಿ ವಾಸಿಸುವ ಜನರ ಕೂಡಿರುವರು. ನಟರು ಯಾಕೆ ತಡಮಾಡುವರು? ಹಿಂದಕ್ಕೆ ಎಂದೂ ಆ ದಂಥ ಪ್ರಯೋಗವನ್ನು ಮಾಡಿ ನಮ್ಮನ್ನು ಆನಂದಗೊಳಿಸಬೇಕೆಂದು ವಿದಾ ವಂತರಾದ ಸಭಾಸದರು ನನಗೆ ಅಪ್ಪಣೆಯನ್ನಿತ್ತಿರುವರು. ಆದ್ದರಿಂದ ಅವರ ಹೇಳಿದ ಗುಣಗಳುಳ್ಳ ಕಥಾನಕದೊಂದಿಗೆ ಅವರನ್ನು ಆದರಿಸುವ.

ನಟನು—( ಪ್ರವೇಶಮಾಡಿ ) ಆರ್ಯರೇ, ಈ ಪರಮಪೂಜ್ಯರು ಹೇಳಿ ಗುಣಗಳಾವವು?

ಸೂತ್ರಧಾರ---

ವಿಪುಲರಸಂಗಳಿಂದಭಿನಯಂಗಳ ಗೂಢತೆಯಿಂದೆ ಸೌಹೃದಂ ।
ಗುಪಚಿತ ಮೋದನಂ ಕೊಡುವ ಚೇಷ್ಟೆಗಳಿಂದೆ ಮನೋಹರಂ ವಿದ ।
ಗ್ಧಪದದ ಯೋಜನಂಗಳತಿ ಸುಂದರವಾಗಿಹವೀ ಕಥಾಂಗದೋಳ್ ।
ಕುಪಿತರ ಭೀಕರಂ ರಸವು ಕಾಮನ ಲೀಲೆಯೊಳಂಗಮಾದುದು ॥ ೫

ನಟನು—ಆರ್ಯರೇ ಇದೆಲ್ಲ ಯಾವ ಪ್ರಕರ್ಣದಲ್ಲಿ ?

ಸೂತ್ರಧಾರ—( ವಿಚಾರಮಾಡಿ ) ನೆನಪಾಯಿತು. ದಕ್ಷಿಣದೇಶದಲ್ಲಿ ಪ ಪುರವೆಂಬ ಹೆಸರಿನ ನಗರವಿರುತ್ತದೆ. ಅಲ್ಲಿ ಕಾಶ್ಯಪಗೋತ್ರದವರು ತಮ್ಮ ವಂ ವನ್ನೇ ಪುನೀತಮಾಡುವರು, ಪಂಚಾಗ್ನಿಗಳ ಸೇವೆಮಾಡುವವರೂ ನಿಯಮದಂ ನಡಿಯುವವರೂ, ಸೋಮರಸಪಾನಮಾಡುವವರೂ ಉದುಂಬರವೆಂಬ ಅ ಹೆಸರುಳ್ಳ ಅಧ್ಯಾತ್ಮಜ್ಞಾನವನ್ನು ಪಡೆದ ಬ್ರಾಹ್ಮಣರು ಇರುತ್ತಾರೆ.

॥ಮಲ್ಲಿಕಾಮಾಲೆ॥

ಆ ವಿಧರ್ ತ್ತಿಳಿದೆಲ್ಲ ಶಾಸ್ತ್ರದ ತತ್ವವಂರರಿತಿರ್ಪರಾ ।
ಕೋವಿದರ್ಧನವನ್ನು ಲೋಕಹಿತಾರ್ಥವೆನ್ನುತೆ ಕೂಡಿಸಿ ।
ದಾರ್ವಗಂ ಸತಿಯುನ್ನಪತ್ಯಕೆ ಭೋಗಿಸುತ್ತಿಹರಾವರರ್ ।
ಜೀವಿಸುತ್ತಿಹರಾಮಹಾತ್ಮರು ಲೋಕದೊಳ್ ತಪವರ್ಧಿಸಲ್ ॥ ೬ ॥

ಇಂಥ ವಂಶದಲ್ಲಿ ಹುಟ್ಟಿದ ಭಟ್ಟಗೋಪಾಲನ ಮೊಮ್ಮಗನೂ, ಪವಿತ್ರವಾದ ಕೀರ್ತಿಯನ್ನು ಹೊಂದಿದ ನೀಲಕಂಠನ ಮಗನೂ ಶ್ರೀಕಂಠನೆಂಬ ಪದವಿಯನ್ನು ಪಡೆದವನೂ, ವ್ಯಾಕರಣ, ಸಾಹಿತ್ಯ, ನ್ಯಾಯಶಾಸ್ತ್ರಗಳನ್ನು ಬಲ್ಲವನೂ ಜಾತೂಕರ್ಣೀ ಪುತ್ರನೂ ಆದ ಭವಭೂತಿಯೆಂಬ ಕವಿಯು ಈ ಗ್ರಂಥದ ಕರ್ತನು ನಮ್ಮ ನಟರು ಆ ಕವಿಯನ್ನು ಪ್ರೇಮ ಪೂರ್ವಕವಾಗಿ ಆದರಿಸಿದ್ದರಿಂದ ಮೊದಲು ಹೇಳಿದ ಗುಣಗಳುಳ್ಳ ತನ್ನ ಗ್ರಂಥವನ್ನು ನಮ್ಮ ಕಯ್ಯಲ್ಲಿ ಕೊಟ್ಟಿರುವನು. ಅಲ್ಲಿ ಮಾತಿನ ರಚನೆಯು ಕೆಳಗೆ ಹೇಳಿದಂತೆ ಅದೆ.

॥ ಉತ್ಪಲಮಾಲಾ ॥

ನನ್ನನು ನಿಂದೆಗೆಯ್ವ ಜನರೇನರಿತಿರ್ಪರೊ ತಾವೇ ಬಲ್ಲರೀ ।
ಯುನ್ನತ ಗ್ರಂಥವನ್ನವರಗೋಸುಗ ನಾಬರೆದಿಲ್ಲ ಮುಂದೆ ಸಂ ।
ಪನ್ನ ಸಮಾನಧರ್ಮಿಗಳು ಲೋಕದೊಳುದ್ಭವ ಪೊಂದಲಾರರೇ ।
ಇನ್ನುಳಿದಿರ್ಪಕಾಲ ಮಿತಿಗಾಣದು ಭೂಮಿ ವಿಶಾಲಮಿರ್ಪುದು ॥ ೭ ॥

ಈ ನಾಟಕದ ಪ್ರಯೋಗದ ದೆಶೆಯಿಂದ ನಟರಿಗೆ ತಮ್ಮ ತಮ್ಮ ಪದಗಳ ಮತ್ತು ವೇಷಧಾರಣೆಯ ಸಿದ್ಧತೆಯನ್ನು ತೀವ್ರಮಾಡಿರೆಂದು ಹೇಳು. ಕವಿಯ ವರ್ಣನೆಯ ಬಗ್ಗೆ ಅವನು ತಾನಾಗಿಯೇ ಹೇಳಿರುವದೇನಂದರೆ—

॥ ಕಂದ ॥

ನನ್ನಗುರು ಜ್ಞಾನನಿಧಿ ಪೆಸ ।
ರನ್ನನುಸರಿಸೆವನ ಗುಣಗಳಿರುತಿರೆ ಜಗದೊಳ ।
ಗಿನ್ನೊಳ್ಳೆ ಗುಣಿಯ ಗುಣವನು ।
ಸನ್ನುತದಿಂ ಪೊಗಳಲದು ಮಮಸ್ತುತಿಯಲ್ತೆ ॥ ೮ ॥

॥ ಮಲ್ಲಿಕಾಮಾಲೆ ॥

ವೇದಶಾಸ್ತ್ರಗಳೋದು ಸಾಂಖ್ಯದ ಬೋಧ ಯೋಗದ ಶೋಧಗಳ್ ।
ಸಾಧಿಸಲ್ಕನ ನಾಟಕಂಗಳ ಯೋಗ್ಯವಲ್ಲದ ವಿದ್ಯಗಳ್ ।
ಬೋಧಿಸುತ್ತೆ ಮನೋಹರಾರ್ಥಗಳನ್ನು ಗೌರವದಿಂದೆ ಸ ।
ದ್ಬೋಧವಂ ಲಲಿತೋಕ್ತಿಯಿಂ ತಲಿದೋರುವಂದದಿ ಮಾಳ್ಪುದು ॥ ೯ ॥

ನಟನು—ಪ್ರತಿಯೊಬ್ಬ ನಟನಿಗೆ ಸರಿಯಾಗಿ ಪಾತ್ರದ ಅಭ್ಯಾಸವನ್ನು ಪೂಜ್ಯರೇ ಮಾಡಿಸಿರುವಿರಿ. ಪೂಜ್ಯರೇ ಮಾತ್ರ ಎಲ್ಲಕ್ಕೂ ಹೆಚ್ಚಿನದಾದ ವೃದ್ಧ ಬುದ್ಧ ಸನ್ಯಾಸಿನಿಯ ಪಾತ್ರವನ್ನು ಕೈಕೊಂಡಿರುವಿರಿ. ನಾನು ಅವಳ ಶಿಷ್ಯಳಾದ ಅವಲೋಕಿತೆಯ ಪಾತ್ರವನ್ನು ಸಿದ್ಧಪಡಿಸಿರುವೆನು.

ಸೂತ್ರಧಾರ— ಮುಂದೆ

ನಟ—ನಾಟಕದ ನಾಯಕನಾದ, ಮಾಧವನೆಂಬ ಮಾಲತಿಯ ಪ್ರಾಣವಲ್ಲಭನ ಪಾತ್ರದ ಬಗ್ಗೆ ಏನುಮಾಡತಕ್ಕದ್ದು ?

ಸೂತ್ರಧಾರ—ಕಲಹಂಸ, ಮಕರಂದರ ಪ್ರವೇಶದ ವೇಳೆಯಲ್ಲಿ ಅದನ್ನು ಗೊತ್ತುಮಾಡಲಿಕ್ಕೆ ಬರುವದು.

ನಟ —ಹಾಗಾದರೆ ಆ ನಾಟ್ಯದ ಪ್ರಯೋಗದಿಂವಲೇ ಈ ಸಭಿಕರನ್ನು ಆನಂದಗೊಳಿಸುವ.

ಸೂತ್ರಧಾರ— ಒಳ್ಳೇದು, ಇಕೋ ನೋಡು, ನಾನು ಕಾಮಂದಕಿಯಾದೆನು,

ನಟ—ನಾನಾದರೂ ಅವಲೋಕಿತೆಯಾದೆನು.

( ಹೀಗೆಂದು ಹೋಗುತ್ತಾರೆ. )

## ಪ್ರಸ್ತಾವನೆ.

( ಕೆಂಪು ವಸ್ತ್ರಗಳನ್ನು ಧರಿಸಿದ ಇಬ್ಬರು ಪ್ರವೇಶಿಸುವರು )

ಕಾಮಂದಕಿ—ಮಗಳೇ ಅವಲೋಕಿತೇ ?

ಅವಲೋಕಿತೆ—ದೇವೀ ಏನಪ್ಪಣೆ ?

ಕಾಮಂದಕಿ—ಸರ್ವಗುಣಸಂಪನ್ನರಾದ, ಭೂರಿವಸುದೇವರಾತರ ಮಕ್ಕಳಾದ ಮಾಲತೀಮಾಧವರ ಮಂಗಲವಿವಾಹವು ಸರ್ವಸಮ್ಮತವಾಗಬಹುದೇ ?

( ಎಡಗಣ್ಣುಹಾರಿದಂತೆ ನಟಿಸಿ ಆನಂದದಿಂದ )

॥ ಕಂದ ॥

ಪಾರುತೆ ವಾಮಂನೇತ್ರಂ ।
ತೋರುತೆ ಮುಂದಾಗುತಿರುವ ಕಲ್ಯಾಣವತಾ ॥
ಬೀರುವದೆನ್ನೊಳು ಮೋದವ ।
ಚಾರುತರ ಜ್ಞಾನನೇತ್ರಮೆಂಬೋಲ್ ಮನದೋಳ್ ॥ ೧೦ ॥

ಅವಲೋಕಿತೆ— ದೇವಿಯವರ ಮನಸು ಬಹಳೇ ಅಸ್ವಸ್ಥವಾದಂತೆ ತೋರುತ್ತದೆ ಇದೇನಾಶ್ಚರ್ಯವು! ದೇಹವನ್ನು ಆಚ್ಛಾದಿಸುವ ಮಟ್ಟಿಗೆ ಹರಕು ಚಿಂದೆಗಳು ಮತ್ತು ಪ್ರಾಣಧಾರಣ ಮಾಡುವ ಮಟ್ಟಿಗೆ ಅನ್ನ, ಇಷ್ಟೇ ತಮ್ಮ ಪ್ರಪಂಚವಿದ್ದು, ಮಂತ್ರಿಶ್ರೇಷ್ಠನಾದ ಭೂರಿವಸುವು ತಮ್ಮಂಥ ಪೂಜ್ಯರನ್ನು ಇಂಥ ಕೆಲಸದಲ್ಲಿ ತೊಡಗಿಸುವದೂ, ಮತ್ತು ಸಂಸಾರದ ಬಂಧನೆಗಳನ್ನು ಕಡಿದು ಹಾಕಿದ ತಮ್ಮ ಆತ್ಮವು ಇವುಗಳಲ್ಲಿ ಮಗ್ನವಾಗುವದೂ ಆಶ್ಚರ್ಯದ ಮಾತೇಸರಿ.

ಕಾಮಂದಕಿ—ಮಗಳೇ ಹಾಗೆನ್ನಬೇಡ.

॥ ಉತ್ಪಲಮಾಲಾ ॥

ಆ ವರಮಂತ್ರಿ ನನ್ನನು ವಿಧೇಯಸುಕಾರ್ಯಗಳಲ್ಲಿ ಯೋಜಿಸು ।
ತ್ರೀವಿಧ ನನ್ನ ಮೇಲಿರುವ ಪ್ರೇಮವ ನಂಬಿಗೆಯನ್ನು ತೋರ್ಪನೀ ।
ಗಾವೆಡರನ್ನು ನೋಡದವ ಪೇಳಿದ ಕಜ್ಜವ ಪ್ರಾಣಪೋದರೂ ।
ನಾಬಿಡನೆಲ್ಲ ನನ್ನ ತಪನಾಶನ ಪೊಂದಿದೊಡೀಗ ಮಾಡದೇ ॥ ೧೧ ॥

ಏನು ನಿನಗೆ ಗೊತ್ತಿಲ್ಲವೇ ? ನಾವು ವಿದ್ಯಾರ್ಜನೆಯ ಬಗ್ಗೆ ಬೇರೆಬೇರೆ ದಿಕ್ಕುಗಳಲ್ಲಿ ತಿರುಗಿದೆವು. ಆಗ್ಗೆ ನಮ್ಮ ಸಹವಾಸವು ಕೂಡಿತು. ಆಗಲೇ ನಮ್ಮ ಸೌದಾಮಿನಿಯ ಕಣ್ಣುಮುಂದೇ, ಈ ಭೂರಿವಸು ದೇವರಾತರು ತಮ್ಮತಮ್ಮ ಮಕ್ಕಳಲ್ಲಿ ಶರೀರಸಂಬಂಧವನ್ನು ಅವಶ್ಯವಾಗಿ ಮಾಡತಕ್ಕದ್ದೆಂದು ಪ್ರತಿಜ್ಞೆ ಮಾಡಿದ್ದರು. ಅದರಂತೆ ಈಗ ವಿದರ್ಭರಾಜನ ಮಂತ್ರಿಯಾದ ಪರಮಪೂಜ್ಯ ದೇವರಾತನು ತನ್ನ ಮಗನಾದ ಮಾಧವನನ್ನು ಅನ್ವೀಕ್ಷಿಕಿಯ ಅಭ್ಯಾಸಕ್ಕೋಸ್ಕರ ಕುಂಡಿನಪುರದಿಂದ ಈ ಪದ್ಮಾವತಿಗೆ ಕಳಿಸಿದ್ದು ಬಲು ಒಳಿತಾಯಿತು.

॥ ಚಂಪಕ ॥

ನೆನಪಿಗೆ ತಂದುಕೊಟ್ಟನು ಸಖಾಯನಿಗಾತನು ಪೂರ್ವದಲ್ಲಿ ತಾ ।
ತನುಜರನುಂಟು ಮಾಡುವೆವು ನೆಂಟರನೆನ್ನುತ ಕಂಠನಾದದಿಂ ।
ಮನವರಿತಂದು ಮಾಡಿದ ಪ್ರತಿಜ್ಞೆಯನಾತಗೆ ಪ್ರೇಮವರ್ಧನ ।
ಕ್ಕನುಪಮ ಸುಂದರಂ ಗುಣವಿಭೂಷಿತ ಬಾಲಕನಿಲ್ಲಿ ತೋರಿದಂ ॥ ೧೨ ।

ಅವಲೋಕಿತೆ – ಹಾಗಾದರೆ ಮಂತ್ರಿಶ್ರೇಷ್ಠರು ಮಾಲತಿಯುನ್ನು ಮಾಧವನಿಗೆ ತಾವಾಗಿಯೇ ಕೊಡಲಿಕ್ಕೆ ಯಾಕೆ ಮುಂದೊರೆಯುವದಿಲ್ಲ? ಮತ್ತು ಚೋರ ವಿವಾಹದಬಗ್ಗೆ ತಮ್ಮ ಕಯ್ಯಿಂದ ಗಡಬಡಿ ಯಾಕೆ ನಡಿಸಿರುವರು.

ಕಾಮಂದಕೀ––

ಅರಸನ ಗೆಳೆಯನು ನಂದನ ।
ನೊರಿಸುನವಳನ್ನು ಬೇಡಿ ರಾಜನ ಮುಖದಿಂ ।
ಬರಿದೆ ಕೊಡದಿರಲು ಕೋಪವು ।
ಗುರುತರವಾಗುವದದಕ್ಕೆ ಹಂಚಿಕೆಯಿದು ಕೇಳ್ ॥ ೧೩ ॥

ಅವಲೋಕಿತೆ—ಇದು ಬಲು ಹೆಚ್ಚಿನ ಮಾತು! ಮಂತ್ರಿಶ್ರೇಷ್ಠರು ಈ ಮಾತಿನಕಡೆಗೆ ಮಾಡುವ ಅಲಕ್ಷವನ್ನು ನೋಡಿದರೆ ಅವರಿಗೆ ಮಾಧವನ ಹೆಸರು ಸಹ ಗೊತ್ತಿದ್ದಂತೆ ತೋರುವದಿಲ್ಲ.

ಕಾಮಂದಕಿ—ಮಗಳೇ, ಅದು ಗುಟ್ಟಿನ ಮಾತಾಗಿದೆ.

॥ ಕಂದ ॥

ಮಾಲತಿ–ಮಾಧವರೀರ್ವರು ।
ಬಾಲಿಶದಿಂ ತೋರಿಸುವರು ಪ್ರಣಯುವತನ್ನೊಳ್ ॥
ಮೀಲಿಸಬೇಕೀ ಮಾತ ।
ನ್ನಾಲಿಸದಿರ್ದವರ ತೆರದಿ ನಾನಡಿಯುತ್ತಂ ॥ ೧೪ ॥

ಮತ್ತೆ,—

॥ ಕಂದ ॥

ತನಯೆರನುರಾಗವಾರ್ತೆಯು ।
ಜನರೆಲ್ಲರೊಳೀಗ ತಾನೆ ಹರಡಿರ್ಪುದು ನಾ ॥
ಜನಪಗೆ ನಂದನಗರುಹದೆ ।
ಬಿನದದಿ ಗೋಪಿಸುವೆ ಸುದ್ದಿಯಂ ಚತುರತೆಯಿಂ ॥ ೧೫ ॥

ನೋಡು,

॥ ಮತ್ತೇಭವಿಕ್ರೀಡಿತಂ ॥

ಬಹಿರಂಗಕ್ಕೆ ಮನೋಹರಂ ಸಕಲಮಂ, ಕಾರ್ಯಾಂಗಮಂ ಪ್ರೇಮದಿಂ ।
ವಹಿಸುತ್ತಿರ್ಪನವನಂತೆ ತಾ ನಟಿಸುತಿರ್ಪಂ, ಛಿದ್ರಮಂ ನೋಡಿ ಶ ।
ತ್ರುಹತಿಸ್ಥಾನವ ಗೊತ್ತುಹಚ್ಚುವನು ಕಾಪಟ್ಯಂಗಳಿಂ, ತನ್ನ ಕಾ ।
ರ್ಯ ಹಿತಾರ್ಥಂಗಳ ಸಾಧಿಪಂ ಕುಶಲ ತಾ ಬೇರಿರ್ದು ಮೌನತ್ವದಿಂ ॥೧೬॥

ಅವಲೋಕಿತೆ—ನಾನಾದರೂ ತಮ್ಮಪ್ಪಣೆಯ ಮೇರೆಗೆ ಮೇಲಿಂದಮೇಲೆ ಏನಾದರೂ ಪ್ರಸ್ತಾಪ ತೆಗೆದು ಮಾಧವನನ್ನು ಭೂರಿವಸುವಿನ ಮಂದಿರಕ್ಕೆ ಹೊಂದಿರುವ ರಾಜಬೀದಿಯಲ್ಲಿ ತಿರುಗಾಡಹಚ್ಚುತ್ತೇನೆ.

ಅವಲೋಕಿತೆ—ಮಾಲತಿಯ ಬಾಲಮೈತ್ರಿಣಿಯಾದ ಲವಂಗಿಕೆಯು ನನು ಗಾದರೂ ಹೇಳಿರುವಳು.

॥ ತರಳಂ ॥

ಜಗದಿ ಸುಂದರ ರೂಪವಂ ಧರಿಸಿರ್ದ ನೂತನ ಕಾಮನೇ ।
ನಗರವೀಥಿಯೊಳೀಗ ಸಂಚರಿಪಂತೆ ತೋರುವ ಮಾಧವಂ ।
ಮುಗಧೆ ಮಾಲತಿ ನೋಡಿನೋಡಿ ಮನೋಹರಾಂಗನ ಪ್ರೇಮದಿಂ ।
ದೊಗೆದ ದೇಹದ ತಾಪದಿಂ ಕೊರಗುತ್ತಿಹಳ್ ರತಿಯಂತೆ ತಾ ॥ ೧೭ ॥

ಅವಲೋಕಿತೆ—ಇದು ನಿಜವು. ಯಾಕೆಂದರೆ ಈ ಹೊತ್ತೇ ಅವಳು ತನ್ನ ಮನಸಿನ ತಾಪವನ್ನು ಹೋಗಲಾಡಿಸುವದಕ್ಕಾಗಿ ಬರೆದ ಮಾಧವನ ಚಿತ್ರವನ್ನು ಲವಂಗಿಕೆಯು ಮಂದಾರಿಕೆಯು ಕೈಸೇರಿಸಿರುವಳು.

ಕಾಮಂದಕಿ— ಲವಂಗಿಕೆಯು ಹಾಗೆಮಾಡಿದ್ದು ಒಳ್ಳೇದಾಯಿತು. ಮಾಧವನ ಅನುಚರನಾದ ಕಲಹಂಸನು ಮಠದ ಸೇವಕಳಾದ ಮಂದಾರಿಕೆಯ ಮೇಲೆ ಮನಸಿಟ್ಟಿರುವನು. ಈ ಯುಕ್ತಿಯಿಂದ ಆ ಚಿತ್ರವು ಮಾಧವನಿಗೆ ಮುಟ್ಟಿ ನಮ್ಮ ಕಾರ್ಯಕ್ಕೆ ಆರಂಭವಾಗುವದು.

ಅವಲೋಕಿತೆ—ನಾನಾದರೂ ಮದನೋದ್ಯಾನದಲ್ಲಿ ಮದನಮಹೋತ್ಸವವು ನಡೆದಿರುವದೆಂದು ಮಾಧವನಿಗೆ ಹೇಳಿ, ಅವನಲ್ಲಿ ಲವಲವಿಕೆಯನ್ನು ಹುಟ್ಟಿಸಿ, ಈಹೊತ್ತೇ ಬೆಳಗಿನ ಕಾಲದಲ್ಲಿ ಅವನನ್ನು ಅಲ್ಲಿಗೆ ಕಳಿಸಿರುವೆನು. ಅಲ್ಲಿ ಬಹಳಮಾಡಿ ಮಾಲತಿಯೂ ಹೋಗುವಳು; ಮತ್ತು ಒಬ್ಬರನ್ನೊಬ್ಬರು ಅಲ್ಲಿ ನೋಡುವರು.

ಕಾಮಂದಕಿ—ಭಾಪು, ಮಗಳೇ ಶಹಬಾಸು, ಹೀಗೆ ನನಗೆ ಬೇಕಾದ ಕೆಲಸಗಳನ್ನು ಒದಗಿಸಿಕೊಟ್ಟು, ನೀನು ನನ್ನ ಮೊದಲಿನ ಶಿಷ್ಯಳಾದ ಸೌದಾಮಿನಿಯನ್ನು ನೆನಪಿಗೆ ತಂದುಕೊಡುವೆ.

ಅವಲೋಕಿತೆ—ಪೂಜ್ಯರೇ, ಆ ಸೌದಾಮಿನಿಯು ಈಗ ಆಶ್ಚರ್ಯಕರವಾದ ಮಂತ್ರಸಿದ್ಧಿಗಳನ್ನು ಪಡೆದು ಶ್ರೀಶೈಲಪರ್ವತದಲ್ಲಿ ಕಾಪಾಲಿಕವ್ರತವನ್ನಾಚರಿಸುತ್ತಿರುವಳು.

ಕಾಮಂದಕೀ—ಈ ಸುದ್ದಿ ಎಲ್ಲಿಯದು.

ಅವಲೋಕಿತೆ—ಈ ನಗರದ ಮಹಾಸ್ಮಶಾನದ ಒಂದು ಬದಿಗೆ ಕರಾಲೆ ಎಂಬ ಚಾಮುಂಡೆ ಇರುವಳು.

ಕಾಮಂದಕಿ—ಹೌದು ಅವಳಿಗೆ ಬೇರೆಬೇರೆ ತರದ ಪ್ರಾಣಿಗಳ ಉಪಹಾರ ಮಾಡುವ ಚಟವದೆಯೆಂದು ಸಾಹಸಿಕರು ಹೇಳುತ್ತಾರೆ.

ಅವಲೋಕಿತೆ—ಇಲ್ಲಿಂದ ಸಮೀಪದಲ್ಲಿಯೇ ಇರುವ ಆ ಸ್ಮಶಾನದಲ್ಲಿ ಶ್ರೀಶೈಲಪರ್ವತದಿಂದ ಬಂದ ಅಘೋರಘಂಟನೆಂಬ ಸಾಧಕನು ರುಂಡಮಾಲೆಯನ್ನು ಧರಿಸಿ ಆ ಗುಡಿಯಲ್ಲಿರುವನು. ಅವನ ಬಳಿಯಲ್ಲಿ ಕಪಾಲಕುಂಡಲೆ ಎಂಬ ಒಬ್ಬ ಮಹಾಪ್ರಭಾವಶಾಲಿಯಾದ ಶಿಷ್ಯಳಿರುವಳು. ಅವಳೇ ಈ ಸುದ್ದಿಯನ್ನು ತಂದಿರುವಳು.

ಕಾಮಂದಕಿ—ಸೌದಾಮಿನಿಗೆ ಎಲ್ಲವೂ ಸಾಧ್ಯವಿರುತ್ತದೆ.

ಅವಲೋಕಿತೆ—ಇದೊತ್ತಟ್ಟಗಿರಲಿ. ಪೂಜ್ಯರೇ, ಮಾಧವನ, ಬಾಲಮಿತ್ರನೂ ಸಹಚರನೂ ಆದ ಮಕರಂದನು ನಂದನನ ತಂಗಿಯಾದ ಮದಯಂತಿಕೆಯನ್ನು ಮದುವೆಯಾದರೆ ( ಅದು ) ಮಾಧವನಿಗೆ ಬೇಕಾದ ಮಾತೇ ಆಗುವದು.

ಕಾಮಂದಕಿ—ಆ ಕೆಲಸಕ್ಕೆ ನನ್ನ ಗೆಳತಿಯಾದ ಬುದ್ಧರಕ್ಷಿತೆಯನ್ನು ನೇಮಿಸಿರುವೆನು.

ಅವಲೋಕಿತೆ—ಅದು ನೆಟ್ಟಗಾಯಿತು.

ಕಾಮಂದಕಿ—ಇನ್ನು ಏಳು, ಮಾಧವನ ಸುದ್ದಿಯನ್ನು ತಿಳುಕೊಂಡು ಮಾಲತಿಯನ್ನು ಕಾಣುವ.

( ಹೀಗೆಂದು ಏಳುತ್ತಾರೆ )

ಕಾಮಂದಕಿ—( ವಿಚಾರಮಾಡಿ ) ಮಾಲತಿಯಂತೂ ಬಲು ಗಂಭೀರ ಸ್ವಭಾವದವಳಿರುವಳು. ನಾನು ಎಲ್ಲ ಭಾರವನ್ನು ತನ್ನಕಡಿಗೆ ಒಪ್ಪಿಸಿಕೊಂಡ ದೂತೆಯಂತೆ ವರ್ತಿಸಬೇಕಾಗಿದೆ. ಎಲ್ಲ ತರದಿಂದ—

॥ ಚಂಪಕಮಾಲಾ ॥

ಕಮಲದೊಳೀಗ ಚಂದ್ರಕಲೆ ಶಾರದ ಕಾಲದಿ ಕೂಡಿದಂತೆಯಾ ।
ವಿಮಲ ಕುಲೋದ್ಭವಂಗೆ ಮುದವೀಯಲಿ; ಸದ್ಗುಣೆಯಾತನಲ್ಲಿ ತಾ ।
ರಮಿಸಲಿ; ಬ್ರಹ್ಮ ಕೌಶದಲದೊಳೀಕೆಯನಾತಗೆ ಮಾಡಿದಂ ಮನೋ ।
ರಮಣಿಯ ಮಾಡಿದೀ ಕೃತಿಫಲಾನ್ವಿತವಾಗಲಿ ಲೋಕದಲ್ಲಿ ತಾ ॥೧೮॥

( ಮಿಶ್ರ ವಿಷ್ಕಂಭಕವು ಮುಗಿಯಿತು. )

---

( ಆ ಮೇಲೆ ಕಲಹಂಸನು ಚಿತ್ರಪಟವನ್ನು ತಕ್ಕೊಂಡು ಪ್ರವೇಶಿಸುತ್ತಾನೆ ).

ಕಲಹಂಸ—ನನ್ನೊಡ್ಯಾ ಮಾದುರಾಯಾ, ಕಾಮಣ್ಣನಂತಾ ಚಲವ. ಇವನ್ನ ನೋಡಿ ಮಾಲತಮ್ಮನವರ ಮನಸ ನೀರಾಗಿ ಹರದಾಡಾಕ ಹತ್ತೇತಿ. ಈಗ ನಮ್ಮ ರಾಯರ ಎಲ್ಲಿದಾನೋ ಏನೋ ( ತುಸು ತಿರಿಗಾಡಿ ) ದಣದ ಹೆಣಾ ಆಗಿದೇನ. ಈ ತ್ವಾಟದಾಗ ಒಂದೀಟ ಕುಂತಕ್ಯಾಸ ಆರಾಮ ತೊಗೋತೇನ-ಅಟ್ಟರಾಗ ಮಕರಂದಣ್ಣಾ ನನ್ನೊಡ್ಯಾನೂ ಬರತಾರೆನೊ ನೋಡೂನ (ಹೀಗೆಂದು ಕೂಡ್ರುತ್ತಾನೆ).

(ಆಮೇಲೆ ಮಕರಂದನು ಬರುವನು)

ಮಕರಂದ— ಅವಲೋಕಿತೆಯಂತೂ ಮಾಧವನು ಮದನೋದ್ಯಾನಕ್ಕೆ ಹೋದನೆಂದು ಹೇಳಿದಳು. ಒಳ್ಳೇದು, ನಾನೂ ಹೋಗುವೆನು. (ತುಸು ಮುಂದಕ್ಕೆ ಹೋಗಿ ನೋಡಿ) ಓಹೋ! ಗೆಳೆಯನು ಇತ್ತಕಡಿಗೇ ಬರುತ್ತಿರುವನು. (ದಿಟ್ಟಿಸಿ ನೋಡಿ)

॥ ಉತ್ಪಲಮಾಲೆ ॥

ಕಾಯುವು ಕಂದಿ ಮಂದಗತಿಯಿಂ ಚಲಿಸುತ್ತಿಹನೀತನೀಗತಾ ।
ಧ್ಯೇಯುವನೊಂದು ಕಾಣದಲುಸುರ್ಗರೆಯುತ್ತಿಹನೇನು ಕಾರಣಂ ।
ಪ್ರಾಯುವು ಕಂಡ ವಸ್ತುಗಳ ಚಂದಕೆ ತಾ ಮರುಳಾಗೆ ಕಾಮಬಾ ।

ಣಂ ಯಶಹೊಂದಿ ಲೋಕದೊಳು ಪೀಡಿಸುತಿರ್ಪುದು ಮಾನವಂಗಳಂ॥೧೯॥

(ಆ ಸೌಲಿ ಮೇಲಿನ ಶ್ಲೋಕದಲ್ಲಿ ವರ್ಣಿಸಿದಂತಹ ಸ್ಥಿತಿಯಲ್ಲಿ ಮಾಧವನು ಬರುತ್ತಾನೆ).

ಮಾಧವ—

॥ ಚಂಪಕ ॥

ಬಲುಮನವಿಟ್ಟು ನೋಡಿ ಮುಖಚಂದ್ರಮನಾಕೆಯೊಳೆನ್ನ ಚೇತನಂ ।
ಚಲಿಸದೆ ನಿಂತುಕೊಂಡಿಹುದು ನಾನದನೀಗೆಳೆಯುತ್ತ ಲಜ್ಜೆಯಂ ।
ತೊಲಗಿದೆ ಸೀಲವಂ ಸದೆದೆ ಧೈರ್ಯವನಾಕಳಕೊಂಡೆ ಮತ್ತೆ ಕೇಳ್ ।
ವಿಮಲ ವಿಚಾರವನ್ನಳಿದೆ ನೀಗಲೆ ಕಂಡು ಮನೋಹರಾಂಗಿಯಂ ॥ ೨೦ ॥

ಇದೇನಾಶ್ಚರ್ಯವು!

॥ ಮಲ್ಲಿಕಾಮಾಲೆ ॥

ಕಾಂತೆ ಸನ್ನಿಧಿಯಲ್ಲಿ ತಾನಿರೆ ಭ್ರಾಂತಿಯಿಂ ಮಮಮಾನಸಂ ।
ಶಾಂತವಾಯಿತು ಮಿಂದವೋಲಮೃತೋದಕಂಗೊಳಳಂದದಿಂ ।
ಚಿಂತೆಯೆಲ್ಲ ವಿನೋದದೋಳ್ ಸಲೆ ಶಾಂತವಾಯಿತು ಮತ್ತೆ ನಾ।
ನೆಂತು ತಾಳಲಿ ತಾಪವನ್ನವಳೀಗತಾನಿರೆ ದೂರದೋಳ್ ॥ ೨೧ ॥

ಮಕರಂದ—( ಸಮೀಪಕ್ಕೆ ಹೋಗಿ ) ಮಿತ್ರಾ ಮಾಧವಾ, ಇತ್ತಕಡೆಗೆ ಬಾ. ಮಧ್ಯಾನ್ಹದ ಸೂರ್ಯನು ಪ್ರಖರವಾಗಿರುವನು. ಈ ತೋಟದಲ್ಲಿ ತುಸು ಹೊತ್ತು ಕೂಡ್ರೋಣ.

(ಇಬ್ಬರೂ ಅಡ್ಡಾಡುತ್ತಾರೆ).

ಮಾಧವ—ನಿನ್ನ ಮನಸಿಗೆ ಬಂದಂತೆ ಆಗಲಿ.

ಕಲಹಂಸ—ಇದೇನು! ಮಕರಂದಣ್ಣನ್ನ ಕೂಡಿಕೊಂಡು ಮಾದುರಾಯ ಇಲ್ಲೆ ಬಾಲುಜಜ್ಜಣದಾಗ ಅದಾನ. ಇವನ ಮ್ಯಾಲಿನ ಪ್ರೀತಿಲೆ ಮಾಲತೆಮ್ಮನವರು ಸಣ್ಣಾಗತಾರ. ಅವರು ತಮ್ಮ ಕಣ್ಣಿಗೊಂದೀಟ ಸಮಾದಾನ ಮಾಡಿಕೋಬೇಕಂತ ಬರದಿಟ್ಟ ಮಾದುರಾಯನ ಚಿತ್ತಾರಾ ಅವಗ ತೋರಸತೀನ. ಇಲದಿದ್ದರ ಅವರು ಒಂದೀಟ ಇಸರಂಬಾಗಲಿ.

ಮುಕರಂದ—ಅವರ ದಶೆಯಿಂದ ಇಲ್ಲೇ ಸುವರ್ಣವೃಕ್ಷದ ಕೆಳಗೆ ತುಸು ಹೊತ್ತು ಕೂಡ್ರೋಣ. ಇದರ ಹೂವುಮುಗ್ಗಿಗಳು ಅರಳಿದ್ದು ತಣ್ಣನ್ನ ಸುವಾಸನೆಯಿಂದ ತೋಟವೆಲ್ಲ ಮಗಮಗಿಸುತ್ತದೆ.

(ಇಬ್ಬರೂ ಕೂಡ್ರುವರು)

ಮುಕರಂದ— ಗೆಳೆಯಾ ಮಾಧವಾ, ಪುರದಲ್ಲಿಯ ಹೆಂಗಳೆಯರು ಕೂಡಿ ನೆರವೇರಿಸಿದ ಅತಿ ಮನೋಹರವಾದ ಕಾಮದೇವನ ಯಾತ್ರೆಯಿಂದ ತಿರಿಗಿ ಬಂದಮೇಲೆ ನಿನ್ನ ಸ್ಥಿತಿಯು ತೀರ ಬದಲಾದಂತೆ ತೋರುತ್ತದೆ. ಎಲ್ಲಿಯಾದರೂ ಕಾಮಬಾಣವು ತಗಲಿರುವದೋ?

(ಮಾಧವನು ನಾಚಿಕೆಯಿಂದ ಮೋರೆಯನ್ನು ಕೆಳಗೆ ಮಾಡಿಕೊಂಡು ನಿಲ್ಲುವನು)

(ನಕ್ಕು) ಏನು ನಿನ್ನ ಮುಖಕಮಲವನ್ನು ಕೆಳಗೆ ಇಳಿಬಿಟ್ಟುಕೊಂಡು ಸುಮ್ಮನೇ ನಿಂತಿ?

॥ ೩

ಮದನ ಶೌರ್ಯವನೆಂತು ಪೇಳಲಿ ಸರ್ವಲೋಕದ ಕರ್ತನಂ ।
ಮುದದಿ ಸೋಲಿಸಿ ಪಾರ್ವತೀಪತಿಯನ್ನು ಗೆದ್ದನು ಚಾಪದಿಂ ।
ಸದಮಳಾಂಗನೆ ತಾನುಸಾವ್ರತ ಮಾನವಂಗಳ ಗೆಲ್ವುದಾ ।
ಚದುರಗೇತರ ಕಷ್ಟ ಪೇಳೆನಗೆಲ್ಲ ಮಾಧವನೆ ನಾಚದೇ ॥ ೨೨ ॥

ಮಾಧವ—ಗೆಳೆಯಾ ನಿನ್ನ ಮುಂದೆ ಹೇಳದಂಥದೇನದೆ? ಕೇಳು. ಅವಲೋಕಿತೆಯು ನನ್ನಲ್ಲಿ ಕುತೂಹಲವನ್ನು ಹುಟ್ಟಿಸಿದ್ದರಿಂದ ನಾನು ಕಾಮದೇವನ ಗುಡಿಗೆ ಹೋದೆನು. ಅಲ್ಲಿ ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡಿ ದಣಿದು ಒಂದು ಚಿಕ್ಕ ಬಕುಲವೃಕ್ಷದ ಮಡಿಯ ಒಡ್ಡಿನಲ್ಲಿ ನಿಂತೆನು. ಅದು ಸುಂದರವಾದ ಅಂಗಣದಲ್ಲಿ ಹುಟ್ಟಿದ್ದು, ಅದರ ಮನೋಹರವಾದ ಗುಂಗು ಹಿಡಿಸುವ ಪರಿಮಳದಿಂದ ಎಳೆಯಲ್ಪಟ್ಟ ತುಂಬಿಗಳ ಗುಣಗುಟ್ಟುವ ಹಿಂಡುಗಳೇ ಅದಕ್ಕೆ ಆಭರಣಗಳಾಗಿದ್ದವು. ಅಲ್ಲಿ ಅರಳಿ ದಟ್ಟಾಗಿ ಬಿದ್ದ ಹೂವುಗಳನ್ನು ಅಕಸ್ಮಾತ್ ತಕ್ಕೊಂಡು, ಬಹು ಕುಶಲತೆಯಿಂದ ಒಂದು ಮಾಲೆಯನ್ನು ಮಾಡತೊಡಗಿದೆನು. ಅಷ್ಟರಲ್ಲಿ ಮೀನಕೇತನನ ದಿಗ್ವಿಜಯದ ನಡೆದಾಡುವ ನಿಶಾನೆಯಂತೆ ಗರ್ಭಗುಡಿಯಿಂದ ಒಬ್ಬ ಕನ್ನಿಕೆಯು ಹೊರಬಿದ್ದಳು. ಆ ಗಂ

ಭೀರ ತರುಣಿಯು ಹೊಳೆಯುವ ಸುಂದರ ವೇಷವನ್ನು ಧರಿಸಿದ್ದಳು. ಅದರಿಂದ ಅವಳು ಕುಮಾರಿಕೆಯೆಂದು ಸ್ಪಷ್ಟವಾಗಿ ಕಾಣುತ್ತಿತ್ತು. ಆ ಶಾಂತ ಸ್ವಭಾವದ ರಮಣಿಯು ಬಲು ತತ್ಪರರಾದ ಸೇವಕರನ್ನೊಡಗೂಡಿಕೊಂಡು ನನ್ನ ಕಡಿಗೇ ಬಂದಳು.

॥ಉತ್ಪಲ॥

ಒಂದೆಡೆಯಲ್ಲಿ ಕೂಡಿಸಿದ ಚಂದದ ದೇವತೆಯಂತೆಯೊಪ್ಪಿಯಾ ।
ನಂದವನೀವ ವಸ್ತುಗಳ ಸಂಚಯಕೇತನದಂತೆ ಶೋಭಿಪಳ್ ।
ಇಂದುಕಲಾ ಪಯೋಜದೊಳು ಜ್ಯೋತ್ಸ್ನೆಯ ಕೂಡಿಸಿ ಚಂದದಿಂದೆ ತಾ ।
ಸುಂದರ ಕಾಮಿನೀಕೆಯನು ಮಾಡಿದನೇತಕೆ ಸಂಶಯಂ ವೃಥಾ ॥ ೨೩ ॥

ಮುಂದೆ ಅವಳ ಪ್ರೀತಿಪಾತ್ರರಾದ ದಾಸಿಯರು ಹೂವಿನ ಗುಂಪನ್ನು ಕೂಡು ಹಾಕಲಿಚ್ಛಿಸಿ ಬಿನ್ನೈಸಿದ ಮೇರೆಗೆ ನನ್ನ ಕಡೆಗೇ ಬಂದಳು. ಅವಳು ಯಾವನೊ ಒಬ್ಬ ಸತ್ಕುಲದಲ್ಲಿ ಹುಟ್ಟಿದ ಸುದೈವಿಗೆ ಮನಸೋತಂತೆಯೂ ಬಹು ದಿವಸದಿಂದ ಬೆಳೆದ ಕಾಮಬಾಧೆಯು ಅವಳನ್ನು ಪೀಡಿಸುತ್ತಿದ್ದಂತೆಯೂ ಕಂಡುಬಂತು. ಯಾಕಂದರೆ—

॥ಚಂಪಕ॥

ಮುದುಡಿದ ದೇಂಟಿನಂತೆಸೆವ ಬಾಡಿದ ಕಾಯದಿ ನಿತ್ಯಕಾರ್ಯಮಂ ।
ವಿದುರ ಸಖೀಜನಂಗಳತಿ ಚೋದನದಿಂದಲೆಗೆಯ್ಯುತಿರ್ಪಳಾ ।
ಕದಪಿನ ಬಣ್ಣವೀಗ ಕೊರೆದಿರ್ಪಭದಂತಹ ಬಿಳ್ಪಿನಿಂದೆ ತಾ ।
ಮುದದಿ ಕಲಂಕವನ್ನಳಿದ ಚಂದ್ರನ ಶೋಭೆಯ ನೀವುತಿರ್ಪುದು ॥ ೨೪ ॥

ಅವಳು ನನ್ನ ದೃಷ್ಟಿಗೆ ಬಿದ್ದಕೂಡಲೆ ನನ್ನ ಕಣ್ಣಿಗೆ ಅಮೃತದ ಅಂಜನ ಹಚ್ಚಿದಂತಾಗಿ, ಅವಳು ನನಗೆ ಹೇಳಲಾರದಷ್ಟು ಆನಂದಕೊಟ್ಟಳು. ಲೋಹಚುಂಬಕವು ಕಬ್ಬಿಣದ ತುಂಡನ್ನು ಎಳೆಯುವಂತೆ ನನ್ನ ಅಂತಃಕರಣವನ್ನು ಎಳಕೊಂಡುಬಿಟ್ಟಳು. ಹೆಚ್ಚಿಗೆ ಏನು ಹೇಳಲಿ.

॥ ಉತ್ಪಲವಾಲಾ ॥

ಮಾನಸವೆನ್ನದಾಶೆಯೊಳು ಕಾರಣವಿಲ್ಲದೆ ನಟ್ಟಿತಿನ್ನದೀ ।
ಗೆನ್ನನು ತಾಪಸಂತತಿಗೆ ಶೋಕದ ಸಾಗರಕೀಡು ಮಾಡಿತು ।

ಮನ್ನಿಸಿ ಸೌಖ್ಯವಂ ಮನುಜಗೀವುದು ದುಃಖಗಳನ್ನು ತೋರ್ಪುದೀ ।
ಗಿನ್ನವಲಂಬಿಸಿರ್ದ ಬಿದಿಯನ್ನದು ಮಾನವರೊಳ್ ಪರೀಕ್ಷಕಂ ॥ ೨೫ ॥

ಮಕರಂದ—'ಪ್ರೇಮ' ಮತ್ತು 'ಕಾರಣ' ಇವು ಕೂಡಿರುವದು ಅಸಂಭವ ನೋಡು-

॥ ಮತ್ತೇಭವಿಕ್ರೀಡಿತ ॥

ಮನದೊಳ್ ಪುಟ್ಟದು ಪ್ರೀತಿ ತಾ ಹೊರಗೆ ತೋರುತ್ತಿರ್ಪುಪಾಧಿಂಗಳಿಂ ।
ಜನಿಸುತ್ತಿರ್ಪುದೊಳಾಂತ ಕಾರಣದಿ ಕಟ್ಟಿಳ್ಕರ್ ಪದಾರ್ಥಂಗಳೋಳ್ ।
ವನಜಂ ಸೂರ್ಯನ ಕಂಡು ತಾನರಳಿಯಾನಂದಂಬಡುತ್ತಿರ್ಪುದು ।
ಘನಪ್ರೇಮಾನ್ವಿತ ಚಂದ್ರಕಾಂತ ಶಿಲೆ ಚಂದ್ರಂಗೀವುದು ದ್ರಾವಮಂ ॥೨೬॥

ಮುಂದೇನಾಯಿತು?

ಮಾಧವ—ಮುಂದೆ ಅಲ್ಲಿ-

॥ ಚಂಪಕ ॥

ಮಣಿಸುತ ಸುಭ್ರುವಂ ಸಖಿಯರೀತನೆ ಯನ್ನುತ ನೋಡುತೆನ್ನೊಳಾ ।
ಗುಣಯುತ ಬಾಲೆಯರ್ ಮಧುರಹಾಸ್ಯದಿ ತಮ್ಮೊಳು ಮಾತನಾಡಿದರ್ ।
ಮಣಿಯುತ ನೋಡುತೆನ್ನ ಗುರುತಿರ್ದವರಂತೆ ವಿಲಾಸದಿಂದೆ ರಾ ।
ಗಿಣಿಯರು ನೋಡಿದರ್ ಮುದದಿ ಕಣ್ಣಿಳ ಸನ್ನೆಯಲೊಬ್ಬರೊಬ್ಬರೊಳ್ ॥೨೭॥

ಮಕರಂದ—ಏನು? ಗುರ್ತವನ್ನೂ ಹಿಡಿದರಂತೆ!

ಮಾಧವ—ಆಮೇಲೆ ಅವರು ಲೀಲೆಯಿಂದ ಕರಕಮಲಗಳನ್ನು ಮೇಲಕ್ಕೆತ್ತಿ ಚಪ್ಪಾಳೆ ಇಕ್ಕುವಾಗ್ಗೆ ಬಳೆಗಳು ಅಲ್ಲಾಡುತ್ತಿರಲು, ಬೆವರಿದ ಹಂಸಗಳಂತೆ ಹೆಜ್ಜೆಗಳನ್ನಿಟ್ಟು ತಿರುಗಿದರು. ಅವರು ತಿರುಗಿ 'ದೇವೀ, ನಮ್ಮ ದೈವ ತೆರೆಯಿತು, ಇಲ್ಲೇ ಯಾವನೋ ಒಬ್ಬನು ಯಾವಳೋ ಒಬ್ಬಳ ವಲ್ಲಭನಿರುವನು' ಅಂದರು. ಅವರು ತಿರುಗುವಾಗ್ಗೆ ಮಂಜುಳಸ್ವರ ಮಾಡುವ ಪೈಜಣದ ಕೂಡ ಒಡ್ಯಾಣದ ಗೆಜ್ಜೆಗಳು ತಾಳಹಿಡಿದವು.

ಮಕರಂದ—ಆಂ! ಹಾಗಾದರೆ ಮೊದಲೇ ಉದ್ಭವಿಸಿದ ದೃಢವಾದ ಪ್ರೇಮವು ಹೊರಬಿತ್ತು.

ಕಲಹಂಸ—ಸಂಪಾಗೇನೋ ಅವರದ ಹೆಣ್ಣಿನ ಕತಿ ನಡಧಾಂಗ ಕಾಣ

**ಶಶಿ.**

ಮಕರಂದೆ—ಮುಂದೆ—

**ಕೂಧವ—** || ತರಳಂ ||

ಕುವಲಯಾಕ್ಷಿಯಳೆನ್ನ ನೋಡಲು ಧೈರ್ಯವಂ ಕಳಕೊಂಡು ತಾ ।
ಭುವನದೋಳ್ ಜಯಶಾಲಿ ಕಾಮನು ಪೇಳಿದಂದದಿ ಹುಚ್ಚಿಯಂ !
ತವಳು ಸಾತ್ವಿಕಭಾವಪೂರಿತಳಾಗಿ ಕಾತರಿಸುತ್ತಿರಲ್ ।
ತವಕದಿಂ ನರಪೇಳಲಾರದ ಭ್ರಾಂತಿಯಾಕೆಯ ಸೇರಿತು ॥ ೨೮ ॥

**ಆಮೇಲೆ—**

|| ಚಂಪಕ ||

ಕುಣಿಸುತ ಭ್ರೂಗಳಂ ತೆರೆದ ನೇತ್ರದೊಳಾಕೆಯು ಮಂದನೋಟದಿಂ ।
ಕೊನೆ ನಿಡುಗಣ್ಣಿನಿಂ ಮಧುರ ಫಲ್ಲವಿಲೋಚನದಿಂದೆ ನೋಡಿದಳ್ ।
ಮಣಿಯಲು ನನ್ನ ನೋಟನವಳೋಳ್ ಕಿರಿಮುಚ್ಚುವಳಾಕೆ ದೃಷ್ಟಿಯಂ ।
ನಿನಿತವಳೆನ್ನ·ಮಾಡಿದಳು ತನ್ನವಲೋಕನಗಳೆ ಪಕ್ಕಮಂ ॥ ೨೯ ॥

**ಮತ್ತೆ—**

|| ಚಂಪಕ ||

ಮಣಿದ ಮನೋಹರೇಕ್ಷಣಗಳ ಮಂದಕಟಾಕ್ಷಗಳಿಂದೆ ಚಂದದಿಂ ।
ದೆಣಿಕೆಯ ಮೀರಿ ದಟ್ಟವಿಹ ಪಕ್ಷ್ಮದಿ ನಿಶ್ಚಲ ಬೊಂಬೆಯಿಂದೆ ತಾ ।
ಚಣದೊಳಗೆನ್ನ ಕಾತರಿಪ ಮಾನಸವನ್ನೆಳೆಯುತ್ತ ಪ್ರೇಮದಿಂ ।
ತಣಿಸುತ ನುಂಗುತಾ ಹೆದೆಯುಮಂ ಕುಡಿನಳ್ ಸಲೆ ಬೇರನೆಲ್ಲನೂ ॥೩೦॥

ಆ ಎಲ್ಲ ತರದಿಂದ ಮನೋಹರಳಾದ ಸ್ತ್ರೀಯು ಸಮೀಪದಲ್ಲಿಯೇ ಇದ್ದು ಸ್ನೇಹರಸವನ್ನು ಸುರಿಸಿದ್ದರಿಂದ ನಾನು ಮರುಳಾದೆನು. ನನ್ನ ಧೈರ್ಯವು ನಷ್ಟವಾದದ್ದನ್ನು ಮುಚ್ಚಿಕೊಳ್ಳಬೇಕೆಂದು ಮೊದಲು ಆರಂಭಿಸಿದ ಬಕುಲ ಮಾಲೆಯನ್ನು ಹೇಗಾದರೂ ಮಾಡಿ ಮುಗಿಸಿದೆನು. ಆ ಮೇಲೆ ಕೈಗಳಲ್ಲಿ ಬೆತ್ತ ಗಳನ್ನು ಹಿಡಿದ ಖೊಜ್ಜೆಯರ ಪರಿವಾರದೊಡನೆ ಅವಳು ಹೆಣ್ಣಾನೆಯನ್ನೇರಿ ನಗರದ ಮಾರ್ಗವನ್ನು ಹಿಡಿದಳು.

!! ಉತ್ಪಲಮಾಲಾ !!

ಪೋಗುವ ಕಾಲದೊಳ್ ವಲಿತಕಂಧರದಿಂದವಳೆನ್ನ ನೋಡಿದಳ್ ।
ಬಾಗಿದ ದೇಂಟಿನಿಂದೆಸೆವ ನೀರಜದಂತೆ ಮನೋಹರಾಂಗಿ ತಾ ।
ವೇಗದೊಳೆನ್ನ ತಾನಿರಿದಳಾಕೆ ಕಟಾಕ್ಷಗಳೆಂಬ ಶಲ್ಯದಿಂ ।
ಭೋಗಿಸಿ ನಾಸುಧಾವಿಷಗಳನ್ನವಳೀಕ್ಷಣದಿಂ ಬಳಲ್ದೆನು ॥ ೩೧ ॥

ಅಂದಿನಿಂದ—

ವಿಂಗಡಿಸಲ್ಕೆ ಬಾರದಿಹ ತುಂಗವಚಂಗಳ ಮಾರಿದಂಥ ತಾ ।
ಪಂಗಳು ಬಾಧಿಸುತ್ತಿಹವು ಪೂರ್ವದೊಳೆಂದಿಗು ನಾನು ಕಾಣೆನೀ ।
ಚಂಗ ವಿಕಾರವಂ ಮುಸುಕುತಿರ್ಪುದು ಮೋಹವು ತಾವಿವೇಕಮಂ ।
ಭಂಗಿಸುತಿರ್ಪುದೀಗೆನಗೆ ಜಾಡ್ಯವು ತಾಪವ ನೀವುತಿರ್ಪುದೂ ॥ ೩೨ ॥

ಮತ್ತೆ—

॥ ವಸಂತತಿಲಕ ॥

ಮುಂದಿರ್ದ ವಸ್ತುಗಳ ವಿಂಗಡಮೆನ್ನೊಳೀಗಲ್ ।
ಚಂದಾಗಿ ತೋರದನುಭೂತ ಪದಾರ್ಥದೋಳ್ ಜ್ಞಾ ।
ನಂ ದೋರದೀಗ ಹಿಮದೀರ್ಘಕೆ ಚಂದ್ರಮುಂಗಳ್ ।
ಮುಂದೋರೆ ತಾಪಕಳವಿಲ್ಲ ಮನಂ ಭ್ರಮಿಷ್ಟಂ ॥ ೩೩ ॥

ಕಲಹಂಸ—ಯಾವಾಕಿ ಮ್ಯಾಲೋ ಏನೋ ಇವನ ಮನಸ ಮಾತ್ರ ಒಳೀಪೆಟ್ಟ ನಟ್ಟಾಂಗ ಕಾಣತತಿ ಆಕಿ ಮಾಲತೆವ್ವನ ಆದಾಳ?

ಮಕರಂದ—ಅಹಹ! ಇವನು ಎಷ್ಟು ಮನಸೋತಿರುವನು? ನನ್ನ ಜೀವದ ಗೆಳೆಯನಿಗೆ ಈ ಮಾತು ಬೇಡೆಂದು ಹೇಳಲೀ? ಅಥವಾ.—

ಮದನನ ಬಾಣದೋಳ್ ಸಿಲುಕಬಾರದು ಹೀನ ವಿಕಾರಗಳ್ಗೆ ಕೇಳ್ ।
ಸದಮಳ ಬುದ್ಧಿ ನಿನ್ನದೆಡೆ ನೀಡಲು ಬಾರದೆನುತ್ತೆ ಪೇಳಲೀ ।
ಗದುಸರಿ ದೋರದೀತನೊಳು ಯೌವ್ವನಮಾಗುದಿತಪ್ರಕಾಶಮಿ ।
ರ್ದ್ದುದೆಯನು ಚಾಚುತಿರ್ಪ ಸ್ಮರನೀತನೊಳಿಟ್ಟಿಹ ತನ್ನ ದೃಷ್ಟಿಯಂ ॥ ೩೪॥

(ಕೇಳುವಂತೆ) ಗೆಳೆಯಾ, ಅವಳ ಹೆಸರೂ, ಕುಲವೂ ಗೊತ್ತಾದವೇ?

ಮಾಧವ—ಕೇಳು. ಅವಳು ಹೆಣ್ಣಾನೆಯನ್ನೇರುವ ಸಮಯದಲ್ಲಿ ಅವಳ

ಗೆಳತಿಯರ ಗುಂಪಿನಿಂದೊಬ್ಬಳು ವೇಶ್ಯಾತರುಣಿಯು ಹಿಂದುಳಿದು ಹೂವುಗ ಳನ್ನಾರಿಸುತ, ನನ್ನ ಸಮೀಪಕ್ಕೆ ಬಂದು ನಮಸ್ಕರಿಸಿ ಹೂವಿನ ಮಾಲೆಯು ನೆವ ದಿಂದ ನನಗಂಡದ್ದೇನಂದರೆ, ಸುಶ್ಲಿಷ್ಟ ಗುಣಗಳಿಂದ ಈ ಸುಮನಸಿನ ಸನ್ನಿವೇ ಶವು ಬಲು ರಮಣೀಯವಾಗಿರುವದು. ಇದರಲ್ಲಿ ನನ್ನೊಡತಿಯ ಕುತೂಹ ಲವುಂಟು. ಅವಳಲ್ಲಿ ಹೊಸದಾಗಿ ವಿಚಿತ್ರವಾದ ಕುಸುಮೇಷು ವ್ಯಾಪಾರವು ಕಂಡುಬರುತ್ತದೆ. ಕುಶಲತೆಯು ಕೃತಾರ್ಥವಾಗಲಿ. ಕರ್ತನು ತೋರಿಸಿದ ಕುಶಲತೆಯು ಫಲಿಸಲಿ. ಈ ಸರಸನು ನನ್ನೊಡತಿಯ ಕಂಠಾಭರಣವಾಗಿ ಯೋಗ್ಯಸ್ಥಾನವನ್ನು ಹೊಂದಲಿ.'

ಮಕರಂದ—ಅಹಹ ! ಈ ಮಾತುಗಳಲ್ಲಿ ಎಷ್ಟು ಕುಶಲತೆ ಇರುವದು !

ಮಾಧವ—ನಾನು ಕೇಳಿದ ಬಳಿಕ ಅವಳು ಹೇಳಿದ್ದೇನಂದರೆ ' ಇವಳು ಭೂರಿವಸು ಮಂತ್ರಿಗಳ ಮಗಳು. ಇವಳ ಹೆಸರು ಮಾಲತಿ. ನಾನು ಈ ನನ್ನೊ ಡತೆಯ ಪ್ರೀತಿಪಾತ್ರಳಾದ ಪರಿಚಾರಿಕೆಯು. ನನ್ನ ಹೆಸರು ಲವಂಗಿಕೆ' ಎಂದು ಹೇಳಿದಳು.

ಕಲಹಂಸ—(ಆನಂದದಿಂದ) ಏನು, ಮಾಲತೆಮ್ಮನವರ! ನಮಪ್ಪ ಕಾರ್ಯಣ್ಣ ಬೇಸಿ ಆಟಾಮಾಡಿದ. ನಮ್ಮ ಕೆಲಸ ಆತಿ.

ಮಕರಂದ—(ತನ್ನಷ್ಟಕ್ಕೆ) ಅಮಾತ್ಯ ಭೂರಿವಸುಗಳ ಮಗಳೆಂದು ಹೇಳು ವದರಿಂದ ಅವಳ ಯೋಗ್ಯತೆಯು ಹೆಚ್ಚಾಗುವದಿಲ್ಲ. ಪೂಜ್ಯಳಾದ ಕಾಮಂದಕೀ ದೇವಿಯು ಮಾಲತಿಯುಂದರೆ ಹಿರಿಹಿರಿ ಹಿಗ್ಗುವಳು. ಅವಳನ್ನು ಅರಸನು ನಂದನನಿಗೆ ಬೇಡುತ್ತಾನೆಂಬ ಸುದ್ದಿಯನ್ನು ಕೇಳಿದ್ದೇವೆ. (ಕೇಳುವಂತೆ) ಮುಂದೆ—

ಮಾಧವ—ಅವಳು ಆಗ್ರಹದಿಂದ ಬೇಡಿದ ಕಾರಣ ಬಕುಲಮಾಲೆಯನ್ನು ಕೊರಳೊಳಗಿಂದ ತೆಗೆದು ಅವಳಿಗೆ ಕೊಟ್ಟೆನು. ಮಾಲತಿಯು ಮುಖ ನೋಡು ವಾಗ್ಗೆ ಕೈತಪ್ಪಿ ಹೆಣೆದ ಬಕುಲಮಾಲೆಯ ಭಾಗವನ್ನು ನೋಡಿ ಅವಳು ಮರ್ಯಾದೆಪೂರ್ವಕ ಆದರಿಸಿ ತಾವು ದೊಡ್ಡ ಅನುಗ್ರಹಮಾಡಿದಂತಾಯಿ ತೆಂದು ಆ ಮಾಲೆಯನ್ನು ಸ್ವೀಕರಿಸಿದಳು. ಆಮೇಲೆ ಜಾತ್ರೆಯೊಡೆದು ಊರ ಜನರ ಗೊಂದಲದಲ್ಲಿ ಅವಳು ಕಾಣದಂತಾದ ಮೇಲೆ ನಾನೂ ಹೊರಟು ಬಂದೆನು.

ಮಕರಂದ—ಗೆಳೆಯನೇ, ಮಾಲತಿಯು ತನ್ನ ಪ್ರೇಮವನ್ನು ತೋರಿಸಿದ್ದು ಬಹಳೇ ಉತ್ತಮವಾಯಿತು. ಬೆಳ್ಳಗಾದ ಗಲ್ಲ ಮೊದಲಾದ ಚಿನ್ಹಗಳಿಂದ ಕಂಡುಬರುವ ಅವಳು ಮೊದಲೇ ಅನುಭವಿಸುತ್ತಿದ್ದ ಕಾಮಬಾಧೆಯು ನಿನ್ನ ಪರವಾದದ್ದೆಂದು ಸ್ಪಷ್ಟವಾಗುತ್ತದೆ. ಗೆಳೆಯನೇ, ನಿನ್ನನ್ನು ಅವಳು ಮೊದಲು ಎಲ್ಲಿ ನೋಡಿದ್ದಳೆಂಬುವದು ಮಾತ್ರ ತಿಳಿಯಲೊಲ್ಲದು. ಅಂಥ ಉಚ್ಚಕುಲದಲ್ಲಿ ಹುಟ್ಟಿದ ಸದ್ಗುಣಮಣಿಗಳು ಒಬ್ಬನ ಮೇಲೆ ಮನಸಿಟ್ಟು ಮತ್ತೊಬ್ಬನಿಗೆ ಕಣ್ಣಸನ್ನೆ ಮಾಡುವದಿಲ್ಲ. ಮತ್ತೆ—

॥ ಮಲ್ಲಿಕಾಮಾಲೆ ॥

ತಮ್ಮೊಳೊಬ್ಬಳನೊಬ್ಬಳಾ ಸಮಯಕ್ಕೆ ನೋಡುತ ಪೂರ್ವದೋಳ್ ।
ನಿಮ್ಮೊಳಾಕೆಯು ಪ್ರೇಮವಿಟ್ಟಿಹಳೆಂದು ಸೂಚನೆ ಮಾಡಿದರ್ ।
ತಮ್ಮೊಳೊಬ್ಬಳಿಗೊಬ್ಬನಿಲ್ಲಿಹನೆಂದು ಲೀಲೆಯೊಳಾಡಿದರ್ ।

ಮಾಧವ—ಮತ್ತೇನು?

ಮಕರಂದ—ಗಮ್ಮನೊಬ್ಬಳು ಚಾರಿಯಳ್ ಬರುತಾಡಿದಳ್ ಚತುರೋ
ಕ್ತಿಯಂ ॥ ೩೫ ॥

ಕಲಹಂಸ—(ಮುಂದಕ್ಕೆ ಸರಿದು) ಮತ್ತಿದನ್ನೂ ನೋಡ್ರಿ. (ಎಂದು ಚಿತ್ರವನ್ನು ತೋರಿಸುತ್ತಾನೆ).

(ಇಬ್ಬರೂ ನೋಡುತ್ತಾರೆ)

ಮಕರಂದ—ಕಲಹಂಸಕಾ, ಈ ಮಾಧವನ ಚಿತ್ರವನ್ನು ಯಾರು ಬರೆದರು?

ಕಲಹಂಸ—ಯಾರ ಇವನ ಮನಸ ಎಳಕೊಂಡುದಾರು, ಅವರ ನೋಡ.

ಮಕರಂದ—ಮಾಲತಿ ಬರೆದಿರುವಳೇನು?

ಕಲಹಂಸ—ಹೌದರಿ.

ಮಾಧವ—ಗೆಳೆಯಾ, ಬಲು ಸಮರ್ಪಕವಾಗಿ ತರ್ಕಮಾಡಿದಿ

ಮಕರಂದ—ಇದು ನಿನಗೆ ಹೇಗೆ ಸಿಕ್ಕಿತು ?

ಕಲಹಂಸ—ನನಗ ಮಂದಾರಿಕೆ ಕೊಟ್ಲ. ಆಕಿಗೆ ಲವಂಗಿಕೀ ಕಡಿಂದ ಸಿಕ್ಕಿತ್ತಂತೆ.

ಮಕರಂದ—ಮಾಲತಿಯು ಮಾಧವನ ಚಿತ್ರನನ್ನು ಯಾಕೆ ಬರೆದಳಂತೆ
ಇದರ ಬಗ್ಗೆ ಮುಂದಾರಿಕೆ ಏನು ಹೇಳಿದಳು?

ಕಲಹಂಸ—ಮನಸಿನ ಹಂಬಲಾ ಒಂದೀಟ ಸಮಾದಾನ ಮಾಡಿಕೊ
ಳ್ಳಾಕ

ಮಕರಂದ—ಗೆಳೆಯಾ, ಶಾಂತನಾಗು

॥ ವಸಂತತಿಲಕ ॥

ಆ ಕನ್ಯೆಯುಳ್ ನಿನಗೆ ಕೌಮುದಿಯಂತೆ ತೋರ್ದಳ್ ।
ನೀ ಕಾಮಿತಂ ಪುರುಷನಾಕೆಯು ಮಾನಸಕ್ಕಿ ।
ನ್ನೇಂ ಕಾರಣಂ ನಿಮಗೆ ಸಂಗಮ ಬಾಧಕಂ ವಿಾ ।
ನಾಂಕಂ ವಿಧಾತ್ರ ನಿಮಗೀಗನುಕೂಲರಾದರ್ ॥ ೩೬ ॥

ನಿನ್ನಲ್ಲಿ ಈ ವಿಕಾರವನ್ನು ಹುಟ್ಟಿಸಿದವಳ ರೂಪವು ನೋಡತಕ್ಕಂಥದಿ
ಲಿಕ್ಕೆ ಬೇಕು. ಆದಕಾರಣ ಮಾಲತಿಯ ಚಿತ್ರವನ್ನು ಇಲ್ಲೆ ಬರಿ.

ಮಾಧವ—ಒಳ್ಳೇದು ಗೆಳಿಯಾ ನಿನ್ನ ಮನಸಿಗೆ ಬಂದಂತೆ ಆಗಲಿ. ( ಪ
ವನ್ನೂ ಲೇಖನದ ಸಾಧನಗಳನ್ನೂ ತಕ್ಕೊಂಡು ಬರೆಯುತ್ತ ) ಮಿತ್ರಾ ಮಕರಂದಾ,

॥ ಹರಿಣೀ ॥

ನಯನಸಲಿಲಂ ವಾರಂ ವಾರಂ ಮುಸುಂಕುತೆ ಕಣ್ಗಳಂ ।
ಲಯದಿ ಸಖಿಯೊಳ್ ಗಾತ್ರಂಗಳ್ ಜಾಡ್ಯಮೀಗವಂದಿಸಲ್ ।
ನಿಯತಕರದಾಂಗುಲ್ಯಂತಂಗಳ್ ಬೆವರ್ದಲಿಯುತ್ತ್ರೆ ತ ।
ನ್ಮಯನೆ ಮನವಾಗಿರ್ದೀ ಕಾಲಕ್ಕೆ ಲೇಖಿಸಲೆಂತುನಾ ॥ ೩೭

ಆದರೂ ಪ್ರಯತ್ನಮಾಡಿ ನೋಡುವೆನು. ( ತುಸುಹೊತ್ತಿನ ಮೇಲೆ ಬರೆದ
ತೋರಿಸುತ್ತಾನೆ. )

ಮಕರಂದ— (ಚಿತ್ರವನ್ನು ನೋಡಿ) ಗೆಳೆಯಾ, ನಿನ್ನ ಆಸಕ್ತಿಯು ಯೋಗ್ಯ
ಸ್ಥಾನದಲ್ಲಿರುವದು. (ಆಶ್ಚರ್ಯದಿಂದ) ಏನು ಇಷ್ಟರಲ್ಲಿಯೇ ಒಂದು ಶ್ಲೋಕವನ್ನು
ಸಹ ಮಾಡಿ ಬರೆದಿಯಾ? (ಓದುತ್ತಾನೆ.)

॥ ಚಂಪಕ ॥

ಇಳೆಯೊಳು ಮಾನವರ್ಗೆ ಮನಸೋಲಲು ಕಾರಣ ಮೊಂದೆಯಲ್ಲ ಕೋ ।
ಮಲವಿಧು ಕಾಂತಿ ಸುಂದರ ಮನೋಹರ ವಸ್ತುಗಳುಂಟನೇಕ-ವಿಾ ।
ಯಳಿಯುಳ ನೋಟವೆನ್ನ ನಯನೋತ್ಸವಮಾಯಿತು ಚಂದ್ರನಂತೆ ತಾ ।
ಹೊಳೆಯಿತು ಜನ್ಮದಲ್ಲಿ ಸರಿಗಾಣೆನು ನಾನಿದಕೆಂದು ಲೋಕದೋಳ್ ॥೩೮॥

( ಪ್ರವೇಶ ಮಾಡಿ. )

ಮಂದಾರಿಕೆ—ಕಲಹಂಸಾ, ಕಲಹಂಸಾ, ಕಳ್ಳಾ, ಕಳ್ಳಾ, ಹೆಜ್ಜೀಗುರ್ತದ ವ್ಯಾಗಿಂದ ನಿನ್ನ ಹಿಡದ್ದೆನ ಬಾ. ( ನಾಚಿ ) ಅವ್ವಾ, ಇಬ್ಬರೂ ರಾಯರ ಇಲ್ಲೆ ಅದಾರಲ್ಲ! (ಸವಿಾಪಕ್ಕೆ ಹೋಗಿ) ಎಪ್ಪಾ ಕಾಲ ಬೀಳತೇನ.

ಇಬ್ಬರೂ— ಮಂದಾರಿಕೇ, ಇತ್ತಕಡಿಗೆ ಬಾ.

ಮಂದಾರಿಕೆ—ಕಲಹಂಸಕಾ, ಚಿತ್ರದ ಪಟಾ ತಾ.

ಕಲಹಂಸ-- ತಗೋ ಇದನ್ನ.

ಮಂದಾರಿಕೆ-- ಇಲ್ಲಿ ಮಾಲತೆಮ್ಮನ್ನ ಯಾರ ಬರೆದರು, ಮತ್ತ ಯಾಕ ಬರದರು !

ಕಲಹಂಸಕ— ಮಾಲತೆಮ್ಮನವರ ಯಾವನ್ನ ಯಾತರ ದೆಶೆಯಿಂದ ಬರದಿದ್ದರೋ ಅವನೇ ಅದರ ದೆಶೆಯಿಂದ ಬರದರ—

ಮಂದಾರಿಕೆ—(ಆನಂದದಿಂದ) ಬರಮದೇವರ ಶ್ಯಾಣೆತನ ಇಂದ ಕೊನೆಗಂಡಾಂಗಾತಿ.

ಮಕರಂದ—ಏನೇ ಮಂದಾರಿಕೆ, ಈ ಮಾತಿನ ಬಗ್ಗೆ ನಿನ್ನ ಗಂಡನು ಹೇಳಿದ್ದು ನಿಜವೇ?

ಮಂದಾರಿಕೆ—ಹೌದ ಸ್ವಾಮಿ.

ಮಕರಂದ—ಮಾಲತಿಯು ಮಾಧವನನ್ನು ಮೊದಲು ಎಲ್ಲಿ ನೋಡಿದಳು.

ಮಂದಾರಿಕೆ— ಕಿಡಿಕ್ಯಾಗ ಕುಂತಕೊಂಡ ನೋಡಿದಳಂತ ಲವಂಗಿಕೆ ಹೇಳತಾಳ.

ಮಕರಂದ—ನಾವಿಬ್ಬರೂ ಬಹುಶಃ ಮಂತ್ರಿಗಳ ಮನಿಯ ಬದಿಯ ಬೀದಿಯಿಂದಲೇ ತಿರುಗಾಡುತ್ತೇವೆ. ಅಂದಮೇಲೆ ಅದು ಸಹಜವೇ.

ಮಂದಾರಿಕೆ— ಒಂದೀಟಪಣಿ ಕೊಡ್ರಿ ದ್ಯಾವರು. ನಮ್ಮಪ್ಪ ಕಾಮ ದೇವರ ಕೂಡಿಸಿಕೊಟ್ಟ ಈಸುದ್ದಿ ಎಲ್ಲಾ. ನನ್ನ ಗೆಣತಿ ಲವಂಗಿಕೆಗೆ ಹೇಳತೇನಃ

ಮಕರಂದ—ಈಗ ಇದೆಲ್ಲ ಅವಳಿಗೆ ಹೇಳತಕ್ಕದ್ದೇ ಸರಿ.

( ಮಂದಾರಿಕೆಯು ಚಿತ್ರವನ್ನು ತಕ್ಕೊಂಡು ಹೋಗುತ್ತಾಳೆ. )

ಮಕರಂದ—ಗೆಳೆಯಾ, ಹೊತ್ತು ನೆತ್ತಿಯ ಮೇಲೆ ಬಂತು, ಬಾ ಮನಿ ಯೊಳಗೆ ಹೋಗುವ.

( ಅಡ್ಡಾಡುತ್ತಾರೆ. )

॥ ಚಂಪಕ ॥

ಕದಪಿನೊಳಾ ಮನೋರಮಯ ಪ್ರೀತಿಯ ಚಾರೆಯರಿಂದ ಮುನ್ನ ಚಿ ।
ತ್ರದ ಕಲೆಯಲ್ಲಿ ತೋರಿದ ಮನೋಹರ ಕೌಶಲವೆಲ್ಲ ಘರ್ಮದಿಂ ।
ದುದಕದಿ ಕೂಡಿ ಸೋರುತಿಹುದೀಗವಳೊಳ್ ವದನಾಂಬುಜಾಂತದೊಳ್ ।
ಸುದತಿಯ ಪ್ರೇಮಪಾತ್ರ ಪರಿಚಾರಿಯ ಬುದ್ಧಿಯು ವ್ಯರ್ಥವಾಯಿತಃ ॥೩೯॥

ಮತ್ತೆ— ॥ ಉತ್ಪಲ ॥

ವಾಯುವೆ, ಮಲ್ಲಿಕಾಮುಕುಲವಿಾಗರಳುತ್ತಿರೆ ಗಂಧಭಾರವಂ ।
ನೀಯಲು ಮಿತ್ರನಂತೆ ವಹಿಸುತ್ತದನೀಗಲೆ ನನ್ನ ಪ್ರೇಮದಾ ।
ತೋಯಜನೇತ್ರೆಯಂ ಪ್ರಚಲ ನೇತ್ರಗಳಿಂ ತಃಸು ಬಾಗಿ ನಿಂದಳಂ ।
ಪ್ರೇಯಸಿಯನ್ನು ನೀ ಬಿಗಿದು ನನ್ನೊಳಗಂಗಗಳಲ್ಲಿ ತೋರೊ ನೀ ॥೪೦॥

ಮಕರಂದ— (ತನ್ನಷ್ಟಕ್ಕೆ)

ಎಂತೆನ್ನ ಮಾಧವನ ಕೋಮಲ ಕಾಯವಂನಾ ।
ಕಂತು ಪ್ರಹಾರದೊಳು ಕಾಯಲಿ ಮಾರನೀಗತಳ್ ।
ನಿಂತಿರ್ಪನಾನೆಮರಿಯಂ ನಳಿಯಲ್ಕೆ ಬಂದಾ ।
ಸಂತಾಪಕಾರಿ ಓಡುಗೆಂಬೆನೆ ನಿರ್ದಯಂತಾ ॥ ೪೧ ॥

ಈಗ ಪೂಜ್ಯಳಾದ ಕಾಮಂದಕಿಯೇ ನಮ್ಮನ್ನು ಕಾಯಬೇಕು.

ಮಾಧವ—(ತನ್ನಷ್ಟಕ್ಕೆ)

॥ ಉತ್ಪಲಮಾಲಾ ॥

ತೋರುವಳಾಕೆ ಯಲ್ಲ ಬದಿಯಲ್ಲೆನಗೀಗಲು ಹಿಂದೆಮುಂದೆಯೂ ।
ಚಾರು ಮನೋಹರಾಂಗಿ ಹೊರಭಾಗದಿ ಸುತ್ತುತಲಂತರಂಗದೊಳ್ ।
ಸೇರುತ ಪ್ರೇಮದಿಂ ಕನಕನೀರಜದಂತಿಹ ವಕ್ತ್ರದಿಂದೆ ತಾ ।
ಜಾರುತ ನೋಡುತೆನ್ನೊಳನುರಾಗದಿ ಕಾಣುವಳೆಲ್ಲ ದಿಕ್ಕಿನೊಳ್ ॥೪೨॥

( ಎಲ್ಲರೂ ಕೇಳುವಂತೆ ) ನನ್ನಲ್ಲಂತೂ ಈಗ

॥ ಚಂಪಕ ॥

ಹೆರಡುತಲಿರ್ಪುದೀಗಲುರಿ ದೇಹದ ಶಕ್ತಿಯು ಕುಗ್ಗಿಸುತ್ತೆ ಮ ।
ತ್ತ್ರರುವನೆ ಮಂದಮಾಡುತಿಹುದಿಂದ್ರಿಯದಾಟವು ನಿಂತು ಮೋಹದಿಂ ।
ದುರಿಯುತೆ ಮಾನಸಂ ತಿರುಗುತಿರ್ಪುದು ಭ್ರಾಮದಿ ಮಾಡುತೆನ್ನ ತಾ ।
ಮರುಳನನಾಕೆಯೊಳ್ ಮನಸು ತನ್ಮಯವಾಗುವದಂತರಂಗದೊಳ್ ॥೪೩॥

( ಮೊದಲನೆಯ ಅಂಕವು ಪೂರ್ಣವಾಯಿತು. )

---

# ಎರಡನೆಯ ಅಂಕ.

(ಇಬ್ಬರು ದಾಸಿಯರು ಬರುತ್ತಾರೆ.)

ಮೊದಲನೆಯವಳು—ಗೆಳತೀ, ಸಂಗೀತಶಾಲೆಯ ಬದಿಯಲ್ಲಿ ಪೂಜ್ಯಳಾದ ಕಾಮಂದಕಿಯೂ ಅವಲೋಕಿತೆಯೂ ಕೂಡ ಏನೋ ಮಾತಾಡುತ್ತ ನಿಂತಿದ್ದಳು.

ಎರಡನೆಯವಳು—ಗೆಳತೀ, ಆ ಮಾಧವನ ಜೀವದ ಗೆಳೆಯನಾದ ಮಕರಂದನು ಮದನೋದ್ಯಾನದ ಎಲ್ಲ ವೃತ್ತಾಂತವನ್ನು ಕಾಮಂದಕೀ ದೇವಿಗೆ ಹೇಳಿದನು. ಆನಂತರ ಭರ್ತೃದಾರಿಕೆಯನ್ನು ಕಾಣುವದಕ್ಕೋಸ್ಕರ ಅವಳೆಲ್ಲಿರುವಳೆಂಬದನ್ನು ತಿಳುಕೊಳ್ಳುವ ದೆಶೆಯಿಂದ ಅವಲೋಕಿತೆಯನ್ನು ಕಳಿಸಿದ್ದಳು. ಲವಂಗಿಕೆಯನ್ನು ಕೂಡಿಕೊಂಡು ಭರ್ತೃದಾರಿಕೆಯು ಏಕಾಂತದಲ್ಲಿರುವಳೆಂದು ನಾನಾದರೂ ದೇವಿಗೆ ಹೇಳಿದೆನು.

ಮೊದಲನೆಯವಳು— ಲವಂಗಿಕೆಯಂತೂ ಬಕುಲಪುಷ್ಪಗಳನ್ನಾರಿಸಲಿಕ್ಕೆಂದು ಮದನೋದ್ಯಾನಕ್ಕೆ ಹೋಗಿದ್ದಳು. ತಿರುಗಿ ಬಂದಿರುವಳೇನು?

ಎರಡನೆಯವಳು—ಹೌದು ಅವಳು ಮನೆಯೊಳಗೆ ಹೆಜ್ಜೆಯನ್ನಿಟ್ಟ ಕೂಡಲೆ ಭರ್ತೃದಾರಿಕೆಯು ಒಬ್ಬಳೇ ಅವಳ ಕಯ್ಯನ್ನು ಹಿಡುಕೊಂಡು ಮೇಲುಪ್ಪರಿಗೆಯನ್ನೇರಿದಳು.

ಮೊದಲನೆಯವಳು—ಬಹಳಮಾಡಿ ಆ ಸಂಪನ್ನಪುರುಷನ ಸಂಗತಿಯನ್ನು ಕೇಳಿ ಸಂತೋಷಪಡುವಳು.

ಎರಡನೆಯವಳು—(ಉಸುರುಬಿಟ್ಟು) ಅವಳಿಗೆಲ್ಲಿಯ ಸಂತೋಷ. ಈಗ ಅವನ ಬಗ್ಗೆ ವಿಶೇಷ ಸಂಗತಿಗಳು ಗೊತ್ತಾಗುವದರಿಂದ ಅವನ ಮೇಲಿನ ಅವಳ ಪ್ರೇಮವು ಉಕ್ಕೇರುವದು. ಮತ್ತು ನಿನ್ನೇ ಭರ್ತೃದಾರಿಕೆಯನ್ನು ನಂದನನಿಗೆ ಕೊಡುವ ದೆಶೆಯಿಂದ ಅಮಾತ್ಯರನ್ನು ಮಹಾರಾಜರು ಕೇಳಿದರು. ಮತ್ತು ಅಮಾತ್ಯರಾದರೂ ಹೇಳಿಬಿಟ್ಟರು.

ಮೊದಲನೆಯವಳು— ಏನೆಂದು ಹೇಳಿದರು ?

ಎರಡನೆಯವಳು—ತಮ್ಮ ಮಗಳಿಗೆ ತಾವೇ ಒಡೆಯರೆಂದು ಇನ್ನುಮೇಲೆ

ಮಾಲತಿಯು ಮಾಧವನ ಮೇಲಿಟ್ಟ ಪ್ರೇಮವು ಅವಳನ್ನು ಸಾಯುವವರೆಗೆ ರಾಣವಂತೆ ಇರಿಯುವದು.

ಮೊದಲನೆಯವಳು—ದೇವಿಯವರು ಇದರಲ್ಲಿ ಏನಾದರೂ ತಮ್ಮ ದೈವಿಕಶಕ್ತಿಯನ್ನು ತೋರಿಸಬಹುದೇ ?

ಎರಡನೆಯವಳು—ಹುಚ್ಚಿಯ ಹಾಗೆ ಏನು ಆಶೆಮಾಡುತ್ತೀ ನಡೆ.

(ಹೀಗೆಂದು ಹೊಗುತ್ತಾರೆ.)

( ಪ್ರವೇಶಕವು ಮುಗಿಯಿತು. )

(ಕುತೂಹಲಭರಿತಳಾಗಿ ಕುಳಿತ ಮಾಲತಿಯೂ ಲವಂಗಿಕೆಯೂ ಪ್ರವೇಶಿಸುತ್ತಾರೆ.)

ಮಾಲತಿ—ಗೆಳತೀ, ಮುಂದೇನಾಯಿತು !

ಲವಂಗಿಕೆ—ಆಮೇಲೆ ಆ ಸತ್ಪುರುಷನು ಈ ಬಕುಲಮಾಲೆಯನ್ನು ನನಗೆ ಕೊಟ್ಟನು.

ಮಾಲತಿ——(ಮಾಲೆಯನ್ನು ತೆಕ್ಕೊಂಡು ಆನಂದದಿಂದ ಲಕ್ಷ್ಯಪೂರ್ವಕವಾಗಿ ನೋಡಿ) ಒಂದು ಬದಿಯಲ್ಲಿ ಇದರ ಹೆಣಿಕೆ ತಪ್ಪಿದೆ.

ಲವಂಗಿಕೆ—ಅದು ಕೆಟ್ಟದ್ದರ ತಪ್ಪು ನಿನ್ನದೇ.

ಮಾಲತಿ—ಅದು ಹೇಗೆ ?

ಲವಂಗಿಕೆ—ಆ ದೂರ್ವೆಯಂಥ ನೀಲವರ್ಣದ ಪುರುಷನು ನಿನ್ನನ್ನು ನೋಡಿ ಪರವಶನಾದನು.

ಮಾಲತಿ—ಗೆಳತೀ, ಸಮಾಧಾನಮಾಡುವ ದಶೆಯಿಂದ ಏನಾದರೂ ಹೇಳುತ್ತೀ.

ಲವಂಗಿಕೆ—ಇದರಲ್ಲಿ ಸಮಾಧಾನ ಹೇಳುವದೇನದೆ! ನೀನು ಪ್ರತ್ಯಕ್ಷ ನೋಡಲಿಲ್ಲವೇ! ಹೆಚ್ಚಾದ ವಿಸ್ಮಯದಿಂದ ಅವನ ಕಡೆಗಣ್ಣುಗಳು ಸ್ತಬ್ಧವಾದವು. ಅವುಗಳನ್ನು ತಡೆಯಲಿಕ್ಕೆಂದು ಕುಣಿದಾಡುವ ಹುಬ್ಬುಗಳು ಅವನಲ್ಲಿ ಮದನಬಾಣವು ನೆಟ್ಟದ್ದನ್ನು ಮನೋಹರವಾಗಿ ಸೂಚಿಸಿದವು. ಅವನು ಗೊಂದಲದಲ್ಲಿ ಬಿದ್ದು ಹುಚ್ಚನಂತೆ ನೋಡುತ್ತಿದ್ದನು. ಅವನ ಕಣ್ಣುಗಳಾದರೂ ಸುಳಿಗಾಳಿಯಿಂದ ನಲಿದಾಡುವ ಅರಳಿದ ಕಮಲದಂತೆ ತೋರುತ್ತಿದ್ದವು. ಮೊದಲು ಕೈಕೊಂಡ ಬಕುಲಹಾರವನ್ನು ಹೆಣೆಯುವ ನೆವದಿಂದ ಅವನು ದಿಟ್ಟಿಸಿ ನೋಡುತ್ತಿದ್ದನು.

ಮಾಲತಿ—(ಲವಂಗಿಕೆಯನ್ನು ಆಲಿಂಗಿಸಿ) ಆಂ ಏನಂದೀ ಅವನ ಆ ವಿಲಾಸಗಳು ನೀನು ಹೇಳಿದಂತೆ ಸ್ವಾಭಾವಿಕವಿದ್ದವೋ ಅಥವಾ ಸಮೀಪದಲ್ಲಿರುವವರನ್ನು ತುಸುಹೊತ್ತು ವಂಚಿಸುವ ದಶೆಯಿಂದ ಹಾಗೆ ಮಾಡಿದನೋ ?

ಲವಂಗಿಕೆ—(ನಕ್ಕು, ತುಸು ಸಿಟ್ಟಿಗೆದ್ದು) ಆ ವೇಳೆಯಲ್ಲಿ ನೀನಾದರೂ ಸ್ವಭಾವಿಕವಾಗಿಯೇ ತಾಳವಿಲ್ಲದೇ ಕುಣಿದಿ.

ಮಾಲತಿ—(ನಾಚಿ ನಕ್ಕು) ಹುಂ ಮುಂದೆ !

ಲವಂಗಿಕೆ—ತಿರುಗಿ ಹೋಗುವ ಜಾತ್ರೆಯ ಜನರ ಗದ್ದಲವಲ್ಲಿ ಅವನು ಕಾಣದಂತಾದಮೇಲೆ ನಾನು ಮಂದಾರಿಕೆಯ ಮನೆಗೆ ಹೋದೆನು. ಚಿತ್ರದ ಪಟವನ್ನು ಬೆಳಗಿನಲ್ಲಿ ಅವಳ ಕೈಯಲ್ಲಿ ಕೊಟ್ಟಿದ್ದೆನು.

ಮಾಲತೀ—ಅದೇಕೆ?

ಲವಂಗಿಕೆ—ಅವಳ ಮೇಲೆ ಮಾಧವನ ಸೇವಕನಾದ ಕಲಹಂಸನು ಮನಸಿಟ್ಟಿರುವನು. ಅವಳು ಅವನಿಗೆ ಅದನ್ನು ತೋರಿಸಬಹುದೆಂದು ಕೊಟ್ಟಿದ್ದೆನು. ಅವಳಾದರೂ ಒಳ್ಳೇ ಸುದ್ದಿಯನ್ನೇ ತಂದಳು.

ಮಾಲತಿ—(ತನ್ನನ್ನು ಮರೆತು ಆನಂದದಿಂದ) ಕಲಹಂಸನಾದರೂ ಆ ಚಿತ್ರವನ್ನು ತನ್ನೊಡೆಯನಿಗೆ ತೋರಿಸಿರಬಹುದೇ? (ಪ್ರಕಾಶವಾಗಿ) ಅವಳೇನು ಒಳ್ಳೇ ಸುದ್ದಿಯನ್ನು ತಂದಳು.

ಲವಂಗಿಕೆ—ನಿನಗೆ ತಾಪಕೊಟ್ಟವನು ತನ್ನ ಮನೋರಥವು ಕೈಗೂಡುವದು ಅಸಾಧ್ಯವೆಂದು ಗೊತ್ತಾಗಿ ಬಲು ಹೆಚ್ಚಿನ ಮನೋವೇದನೆಗಳಿಂದ ಸಂತಪ್ತನಾಗಿ ತನ್ನ ಪೀಡಿತವಾದ ಮನಸ್ಸನ್ನು ತುಸು ಶಾಂತಗೊಳಿಸುವ ದೆಶೆಯಿಂದ ಈ ನಿನ್ನ ಪ್ರತಿಬಿಂಬವನ್ನು ಬರೆದಿರುವನು.

( ಹೀಗೆಂದು ಚಿತ್ರವನ್ನು ತೋರಿಸುತ್ತಾಳೆ )

ಮಾಲತಿ—( ಆನಂದದಿಂದ ನಾಚುತ ತುಸು ಉಸುರ್ಗರೆದು ಕೆಲಕಾಲದವರೆಗೆ ಚಿತ್ರವನ್ನು ನೋಡಿ ) ಈಗಂತೂ ನನ್ನ ಹೃದಯವು ಧೈರ್ಯಗೆಟ್ಟಿತು. ಯಾಕಂದರೆ, ಈ ಸಮಾಧಾನವು ಸಹ ಮೋಸದ್ದಿರಬಹುದು. ಇಲ್ಲಿ ಅಕ್ಷರಗಳೇನೋ ತೋರುತ್ತವೆ. (ಇಳೆಯೊಳು ಮಾನವರ್ಗೆ ಮುಂ. ಓದಿ) ನಿನ್ನ ವಚನಮಾಧುರ್ಯವು ನಿನ್ನ ಚಿತ್ರಕೌಶಲವನ್ನು ಸರಿಗಟ್ಟುವದು. ನಿನ್ನ ದರ್ಶನವು ಆಗ್ಗೆ ಮನೋಹರವಾ

ತೋರಿದರೂ ಕೊನೆಗೆ ಸಂತಾಪದಾಯಕವಾಯಿತು. ನಿನ್ನನ್ನು ನೋಡದೇ ಇದ್ದವರೇ ಧನ್ಯರು. ಅಥವಾ ನೋಡಿ ಮನಸೋಲದವರು ಸುದೈವಿಗಳು.

ಲವಂಗಿಕೆ—ಹೀಗಾದರೂ ನಿನ್ನ ಮನಸಿಗೆ ಸಮಾಧಾನವಾಗುವದಿಲ್ಲವೇ ?

ಮಾಲತಿ—ಹೇಗೆ ?

ಲವಂಗಿಕೆ—ಅವನದೆಶೆಯಿಂದ ಬೊಡ್ಡಿಯಿಂದ ಕಿತ್ತ ಅಶೋಕದಂತಿರುವ ಜೀವವನ್ನು ಹಿಡುಕೊಂಡು ಬಾಡಿದ ಮಲ್ಲಿಗೆಯ ಹೂವಿನಂತೆ ಕುಸುಮಶರ ಬಾಧೆಯಿಂದ ಬಳಲುತ್ತಿರುವಿ. ಅವನಿಗಾದರೂ ಮನ್ಮಥನ ತಾಪವು ದುಸ್ಸಹ ವಾಗಿರುವದು.

ಮಾಲತಿ—ಆ ಪುಣ್ಯಪುರುಷನಿಗೆ ಸುಖವಾಗಲಿ. ನನಗಂತು ಸಮಾಧಾನ ವಾಗುವದು ಅಸಾಧ್ಯವೇ ಸರಿ. ( ಕಣ್ಣಿಗೆ ನೀರುತಂದು )

॥ ಹಾಡು ॥

ಮನಸಿಜನ ತಾಪಂ ನನ್ನಂ ಧೂಮವಿಲ್ಲದೆ ಸುಟ್ಟಿತು ।
ಘನವಿಷವೆ ಮಯ್ಯೊಳ್ಳೀಗಳ್ ತುಂಬಿದಂತೆನಗಾಯಿತು ।
ತನುವಿನೊಳು ಪ್ರತ್ಯಂಗಂ ಜ್ವಾಲಾಹತಂ ಮೃತವಾಯಿತು ।
ಜನನಿ ಜನಕರ್ ನನ್ನನ್ನೀಗಳ್ ಲವಂಗಿಕೆ ಕಾಯುರು ॥ ೧ ॥

ಲವಂಗಿಕೆ—ಇದಂತೂ ಹೀಗೇ ಸರಿ. ಸಜ್ಜನರ ಸಂಗತಿಯು ಅವರು ಸಮೀಪದಲ್ಲಿರುವಾಗ ಆನಂದಕೊಡುವದು. ಅವರು ದೂರಾದ ಕೂಡಲೇ ದುಃಖಕೊಡುವದು. ಅದರಿಂದ ಬೇಸರಬರುವದು. ನನ್ನ ಪ್ರೀತಿಯ ಗೆಳತಿಯೇ, ಅವನನ್ನು ಕಿಟಕಿಯೊಳಗಿಂದ ಒಂದು ಕ್ಷಣಮಾತ್ರ ನೋಡಿದ್ದಕ್ಕೆ ನಿನಗೆ ಪೂರ್ಣಚಂದ್ರನು ಒಳ್ಳೇ ಉರುವಲು ಹಾಕಿದ ಬೆಂಕಿಯಂತೆ ತೋರಹತ್ತಿದನು. ನಿರ್ದಯನಾದ ಕಾಮನಬಾಧೆಯೊಳಗಿಂದ ನಿನ್ನ ಜೀವವು ಪಾರಾಗುವದೋ ಇಲ್ಲೋಯೆಂದು ನಮಗೆ ಚಿಂತೆಯುಂಟಾಯಿತು. ಈಗ ಅವನನ್ನು ಸಾಕಾಗುವವರಿಗೆ ನೋಡಿದ ಮೇಲೆ ನಿನಗೆ ಸಂತಾಪವಾದರೆ ಅದರಲ್ಲಿ ಆಶ್ಚರ್ಯವೇನು ? ಬಯಕೆಯು ಸಾಧ್ಯವಾಗುವದು ಬಲು ಕಠಿಣವಿದ್ದರೂ; ತಮ್ಮ ಬಲವತ್ತರವಾದ ಪ್ರೇಮಕ್ಕನುಸರಿಸಿ ಮಹಾಭಾಗ್ಯಶಾಲಿಯಾದ ಪ್ರಾಣವಲ್ಲಭನನ್ನು ಕೂಡುವದು ಪ್ರಾಣಿಮಾತ್ರಗಳಿಗೆ ಸ್ತುತ್ಯವಾದ ಮಾತೇ ಸರಿ. ಇಷ್ಟುಮಾತ್ರ ನಾವು ಬಲ್ಲೆವು.

ಮಾಲತಿ—ಗೆಳತೀ, ಮಾಲತಿಯು ಜೀವಕ್ಕೆ ಮಾತ್ರ ಕಸಿಕರಬಡುವವಳೇ ಸಾಹಸ ಮಾಡಲುಪದೇಶಮಾಡುವವಳೇ ನಡೆ, ಅತ್ತಕಡೆಗೆ (ಕಣ್ಣಿಗೆ ನೀರುತಂದು) ಅಥವಾ ಅವನನ್ನು ಮೇಲಿಂದ ಮೇಲೆ ನೋಡಿ ಅವನ ಬೆನ್ನಟ್ಟಿ ಓಡುವ ಮನಸನ್ನು ನಿಲ್ಲಿಸಿ ಗಟ್ಟಿಮಾಡಿದರೂ ನಾಚಿಕೆಯನ್ನು ತೀರಬಿಟ್ಟ ಈ ದುರ್ನಡತೆಯಿಂದ ನಿಂದ್ಯಳಾದೆನು. ಆದರೂ ಜೀವದ ಗೆಳತೀ,

॥ ಚಂಪಕ ॥

ಅನುದಿನದಲ್ಲಿ ರಾತ್ರಿಯೊಳು ಪೂರ್ಣಕಲಾನ್ವಿತ ಚಂದ್ರತಾಪವೆ।
ನ್ನನು ಸುಡಲಿನ್ನು ಕಾಮುನೆನಗೇನಧಿಕಂ ಕೊಡಬಲ್ಲ ಪೀಡೆಯಂ ।
ತನುವಿನೊಳಾಶೆ ಇಲ್ಲೆನಗೆ ಕೀರ್ತಿಯು ತಾತನದಿಲ್ಲೆ ಸತ್ಕುಲಂ
ಜನನಿ ಸುದಿಲ್ಲೆ ಜೀವಿತವು ನನ್ನದು ನಲ್ಲನದೇನು ಪೆಚ್ಚುಪೇಳ್ ॥ ೨ ॥

ಲವಂಗಿಕೆ—(ತನ್ನಷ್ಟಕ್ಕೆ) ಇದಕ್ಕೇನುಪಾಯ ಮಾಡಬೇಕು!

(ಪಡದೆಯೊಳಗೀದ ಹಣಿಕಿನೋಡಿ)

ದೂತೆ—ಕಾಮಂದಕೀದೇವಿಯವರು ಇಲ್ಲೇ ಬಂದರು.

ಇಬ್ಬರೂ—ಏನು, ದೇವಿಯವರೇ ?

ದೂತೆ—ಭರ್ತೃದಾರಿಕೆಯನ್ನು ಕಾಣುವದೆಶೆಯಿಂದ ಬರುತ್ತಿರುವರು.

ಇಬ್ಬರೂ—ಹಾಗಾದರೆ ತಡನೇಕೆ ?

(ದೂತೆಯು ಹೋಗುವಳು. ಮಾಲತಿಯು ಚಿತ್ರವನ್ನು ಮುಚ್ಚುವಳು.

(ಕಾಮಂದಕಿಯೂ ಅವಲೋಕಿತೆಯೂ ಬರುತ್ತಾರೆ.)

ಲವಂಗಿಕೆ—(ತನ್ನಷ್ಟಕ್ಕೆ) ಇದು ಬಲು ಒಳಿತಾಯಿತು.

ಕಾಮಂದಕಿ—ಭಾಪು, ಮಿತ್ರಾ ಭೂರಿವಸೋ ಶಹಬಾಸು! 'ತನ್ನ ಮಗಳಿಗೆ ಮಹಾರಾಜರು ತಾವೇ ಒಡಿಯರೆಂದು' ಎರಡೂ ಲೋಕಕ್ಕನುಸರಿಸಿ ಉತ್ತರ ಕೊಟ್ಟೆ. ಈ ಹೊತ್ತಿನ ಮದನೋದ್ಯಾನದ ವಾರ್ತೆಯ ಮೇಲಿಂದಲೂ ಪ್ರಬಲವಾದ ದೈವವು ಅನುಕೂಲವಿದ್ದಂತೆ ತೋರುತ್ತದೆ. ಬಕುಲಹಾರವನ್ನೂ ಚಿತ್ರದ ಹಲಿಗೆಯನ್ನೂ ಒಬ್ಬರಿಗೊಬ್ಬರು ಕೊಟ್ಟದ್ದನ್ನು ನೋಡಿ ಹೇಳಲಾರದಷ್ಟು ಆನಂದವಾಯಿತು. ವಿವಾಹದ ಕೆಲಸದಲ್ಲಿ ಪರಸ್ಪರ ಪ್ರೀತಿಯು ಬಲು

ಕೆಚ್ಚಿನ ಶುಭಲಕ್ಷಣವು. ಎಲ್ಲಿ ಮನಸ್ಸೂ ದೃಷ್ಟಿಯೂ ಕೂಡುತ್ತವೆಯೋ ಅಲ್ಲಿ ಮಂಗಲಕಾರ್ಯವಾಗುತ್ತದೆಂದು ಅಂಗಿರಸನು ಹೇಳಿದ್ದಾನೆ.

ಅವಲೋಕಿತೆ— ಇವಳೇ ಮಾಲತಿ.

ಕಾಮಂದಕಿ—

॥ ಚಂಪಕಮಾಲಾ ॥

ಕೊರಗಿದ ಕಾಯದಿಂದೆ ಕದಳೀಮೃದು ಗರ್ಭದ ಶೋಭೆಯನ್ನು ಪೊ ।
ತ್ತಿರುವಳು ಚಂದ್ರನೊಂದೆಕಲೆಯಂ ಧರಿಸಿರ್ದ ವೊಲಿಕೆ ತೋರ್ಪಳೀ ।
ಗುರುತರ ಕಾಮಬಾಧೆ ಯಿವಳಂ ಸುಡುತಿರ್ಪುದು ನೋಡಿ ನನ್ನೊಳೀ ।
ಮರುಗುವೆ ಕಂಪಿಸುತ್ತೆ ಮನದೋಳ್ ಮುದವೆನ್ನೊಳು ತೋರುತಿರ್ಪುದು ॥೩॥

॥ ಉತ್ಪಲಮಾಲಾ ॥

ಬಾಡಿದ ಬೆಳ್ಳಗಾಗಿರುವ ಕೆನ್ನೆಗಳಿಂದಲೆ ಶೋಭೆಯನ್ನು ತಾ ।
ನೀಡುವಳೀಕೆ ಸತ್ಕುಲದ ಸುಂದರ ದೇಹಗಳಲ್ಲಿ ಮನ್ಮಥಂ ।
ಪೀಡನೆ ಮಾಡಿಯಾಡಲದು ಚಂದವೆ ಕಾಣುತಲಿರ್ಪುದೀಗ ತಾ ।
ನೀಡದಗಿಲ್ಲ ಲೋಕದೊಳಗಾತನು ಕೂಡಿದ ತಾಣಸುಂದರಂ ॥ ೪ ॥

ನಿಜವಾಗಿ ಇವಳು ಕಲ್ಪನಾನಿರ್ಮಿತವಾದ ಪ್ರಿಯಸಮಾಗಮವನ್ನು ಅನುಭವಿಸುತ್ತಿರುವಳು. ಯಾಕಂದರೆ–

॥ ಮಹಾಸ್ರಗ್ಧರಾ ॥

ಸಡಲಿರ್ದೀಬಾಲೆಯಂಗಂಗಳು ಕುಚಮುಕುಲಂಗಂಟನುಚ್ಚೈಕ್ಯ
ವೆಂಬೋಲ್ ।
ನಡುಗುತ್ತಿರ್ದೀ ಕಣ್ಗಳ್ ಸುಖದಿ ಮುಳುಗತಿರ್ದಂತೆ ತೋರು
ತ್ತಲಿರ್ದೀ ।
ಪಿಡಿದೋಳ್ಗಳ್ ಗಂಟನುಚ್ಚಿರ್ದುಡಿಗೆಯು ಮಧರಾಸ್ಪಂದನಂ
ಸ್ವೇದಭಾವಂ ।
ನಡುಗಲ್ಲಂ ತುಂಬಿರೋಮಂಗಳ ನಿಚಯಮಿವಳ್ ಮೈಮರೆತ್ತೆಚ್ಚ
ರಿರ್ಪಳ್ ॥ ೫ ॥

( ಸಮೀಪಕ್ಕೆ ಹೋಗುತ್ತಾಳೆ )

(ಲವಂಗಿಕೆಯು ಮಾಲತಿಯನ್ನು ಅಲ್ಲಾಡಿಸುವಳು. ಇಬ್ಬರೂ ಎದ್ದು ನಿಲ್ಲುತ್ತಾರೆ.)

ಮಾಲತಿ—ದೇವಿಯವರ ಚರಣಕ್ಕೆರಗುವೆನು.

ಕಾಮಂದಕೀ—ಉಚ್ಚ ಕುಲದಲ್ಲಿ ಹುಟ್ಟಿದ್ದಕ್ಕೆ ಸರಿಯಾದ ವರನನ್ನು ಪಡೆಯುವಂಥವಳಾಗು.

ಲವಂಗಿಕೆ—ದೇವಿಯವರೇ ಇಲ್ಲಿ ಮಡಿಯ ಗದ್ದುಗೆ ಇರುವದು.

(ಎಲ್ಲರೂ ಕೂಡ್ರುತ್ತಾರೆ.)

ಮಾಲತಿ—ದೇವಿಯವರೇ ಕ್ಷೇಮವೇ ?

ಕಾಮಂದಕಿ—(ಉಸುರ್ಗರೆದು) ಕ್ಷೇಮವೇ ಸರಿ.

ಲವಂಗಿಕೆ—(ತನ್ನಷ್ಟಕ್ಕೆ) ಇದು ಕಪಟ ನಾಟಕದ ಪ್ರಸ್ತಾವನೆಯೆಂದು ತೋರುತ್ತದೆ. (ಕೇಳುವಂತೆ) ದುಃಖವನ್ನು ಕುತ್ತಿಗೆಯೊಳಗೆ ಒತ್ತಿಕೊಂಡದ್ದರಿಂದ ತಮ್ಮ ಮಾತುಗಳು ಸ್ಪಷ್ಟವಾಗಿ ಹೊರಡಲೊಲ್ಲವು. ಈ ಹೊತ್ತಿನ ಚಿಹ್ನವೇ ಬೇರೆ ತೋರುತ್ತದೆ. ಇಷ್ಟು ಸಂತಾಪಮಾಡಿಕೊಳ್ಳಲಿಕ್ಕೆ ಕಾರಣವೇನಿರಬಹುದು ?

ಕಾಮಂದಕಿ—ಇದೇ, ನಮ್ಮಂಥ ಕಾವಿವಸ್ತ್ರದವರಿಗೂ ನಿಮ್ಮಂಥವರಿಗೂ ಇರುವ ಪರಿಚಯವೇ ಕಾರಣವು.

ಲವಂಗಿಕೆ—ಅದು ಹೇಗೆ ?

ಕಾಮಂದಕಿ— ಏನೇ ನಿನಗೆ ಗೊತ್ತೇ ಇಲ್ಲೇ ?

॥ ಹರಿಣೀ ॥

ಮದನ ವಿಜಯಕ್ಕೆಂದೀ ಬಾಲಾಂಗವಂ ವಿಧಿಮಾಡಿದಂ।
ಮುದದಿ ಚರಿಪೀಕಾಯಂ ಸೌಂದರ್ಯದಿಂ ಮೆರೆಯುತ್ತಿರಲ್।
ಕುಧಿಗೆ ಗುಣಹೀನಂಗೀಗಳ್ ಕೊಟ್ಟಿದೇಂಫಲ ಮಾತೆಯಂ।
ಸುದಿತಕಿದು ತಾಣಂ ಮತ್ತೆಮ್ಮೊಳ್ ಗುಣಾವಿದ ದೋಷವೂ ॥೬।

( ಮಾಲತಿಯು ಗಾಬರಿಯಾದಂತೆ ನಟಿಸುವಳು )

ಲವಂಗಿಕೆ— ಮಹಾರಾಜರ ಮಾತು ಮುರಿಯಲಾರದೆ ನಂದನನಿಗೆ

ಮಾಲತಿಯನ್ನು ಕೊಟ್ಟರೆಂದು ಎಲ್ಲರೂ ಅಮಾತ್ಯರನ್ನು ಹಳಿಯುತ್ತಿರುವರಂತೆ.

ಮಾಲತಿ (ತನ್ನಷ್ಟಕ್ಕೆ) ಏನು? ಅಪ್ಪನು ನನ್ನನ್ನು ಅರಸರಿಗೆ ಆಹುತಿಯಾಗಿ ಕೊಟ್ಟನೇ ?

ಕಾಮಂದಕಿ— ಆಶ್ಚರ್ಯವು ?

|| ಚಂಪಕ ||

ಗುಣಗಳ ನೋಡದಿರ್ದು ಮಗಳಂ ಕೊಡುವಂತಹ ದೆಂಥನೀತಿ ತಾ ।
ನೆಣಿಸನು ವಕ್ರನೀತಿಯೊಳು ರೂಢಿಸಿದಾತನಪತ್ಯಸ್ನೇಹವ ।
ತಣಿಸಲಿ ರಾಜಮಿತ್ರನನು ನಂದನನಂಪಿತ ತಾನೆ ಕೊಟ್ಟು ತ ।
ನ್ನಣುಗೆಯ ನಾಥನನ್ನೊಲಿಸಿ ಕೊಳ್ಳಲಿ ಮಂತ್ರಿಯು ಸ್ವಾರ್ಥಬುದ್ಧಿಯಿಂ
|| ೭ ||

ಮಾಲತಿ—(ತನ್ನಷ್ಟಕ್ಕೆ) ಅಪ್ಪನಿಗೆ ಧೊರೆಗಳ ಪ್ರೀತಿಸಂಪಾದನೆಯು ಹೆಚ್ಚಿನದಾಯಿತು. ಮಾಲತಿಯದೇನೂ ಬೆಲೆಯಿಲ್ಲ.

ಲವಂಗಿಕೆ—ದೇವಿಯುವರೇ, ತಾವು ಅಪ್ಪಣೆ ಕೊಡಿಸಿದ್ದೇ ನಿಜವು. ಇಲ್ಲದಿದ್ದರೆ ಆ ಕುರೂಪಿಗೂ ಮುದುಕನಿಗೂ ಮಗಳನ್ನು ಕೊಡುವಾಗ್ಗೆ ಮಂತ್ರಿಗಳು ಯಾಕೆ ವಿಚಾರ ಮಾಡದೆ ಬಿಡುತ್ತಿದ್ದರು.

ಮಾಲತಿ—(ತನ್ನಷ್ಟಕ್ಕೆ) ಅಯ್ಯೋ ಸತ್ತೆನು. ಅನರ್ಥವೆಂಬ ಈ ಆಕಾಶ ಕೊಡ್ಲಿಯು ದುರ್ದೈವಿಯಾದ ನನ್ನ ಮೇಲೆ ಬಿತ್ತಲ್ಲ !

ಲವಂಗಿಕೆ—ದೇವೀ ಪ್ರಸನ್ನಳಾಗು. ಈ ನನ್ನ ಜೀವದ ಗೆಳತಿಯು ಜೀವದಿಂದಿರುವಾಗಲೇ ಮೃತಳಂತೆ. ಬಾಳುವ ಪ್ರಸಂಗವನ್ನು ತಪ್ಪಿಸು. ಇವಳು ನಿನಗಾದರೂ ಮಗಳೇ.

ಕಾಮಂದಕಿ—ಎಲೆ ಸರಳಸ್ವಭಾವದ ಕನ್ನಿಕೆಯೇ, ಇದರಲ್ಲಿ ದೇವಿಯುವರಿಂದಾದರೂ ಏನಾಗುವಂತಿದೆ ? ಕನ್ನಿಕೆಯರ ವಿಷಯದಲ್ಲಿ ಅವರ ತಂದೆ ಇಲ್ಲವೆ ದೈವವೇ ಏನಾದರೂ ಮಾಡಬಲ್ಲದು. ಕೌಶಿಕ ಋಷಿಯ ಮಗಳಾದ ಶಕುಂತಲೆಯು ದುಷ್ಯಂತನನ್ನೂ, ಉರ್ವಶಿಯೆಂಬ ಅಪ್ಸರೆಯು ಪುರೂರವನನ್ನೂ ವರಿಸಿದರೆಂದು ಬಲ್ಲಿದರು ಹೇಳುತ್ತಾರೆ. ವಾಸವದತ್ತೆಯನ್ನು ಅವಳ ತಂದೆಯು

ಸಂಜಯನೆಂಬ ಅರಸನಿಗೆ ಕೊಟ್ಟಿದ್ದು ಅವಳು ಉದಯನನನ್ನು ವಿವಾಹಮಾಡಿಕೊಂಡಳೆಂದು ಮೊದಲಾದ ಕಥೆಗಳನ್ನು ತಜ್ಞರು ಹೇಳುತ್ತಾರೆ. ಇವೆಲ್ಲ ಸಾಹಸದ ಕೃತ್ಯಗಳು ಹಾಗೆ ಮಾಡೆಂದು ಹೇಳುವದು ಸರಿಯಲ್ಲ. ಸರ್ವಥಾ

॥ ಮಲ್ಲಿಕಾಮಾಲೆ ॥

ರಾಜಮಿತ್ರನಿಗೀಗ ಮಂತ್ರಿಯು ಪುತ್ರಿಯಂ ಕೊಡುತಿರ್ದರ್ತಾ ।
ಯೋಜಿಸುತ್ತಿಹ ಕಾರ್ಯಸಾಧನಕೊಂದು ಹಂಚಿಕೆಯಿಂದಿದಂ ।
ತೇಜಹೀನಗೆ ಕೊಡಲೀಗಿಕೆ ಧೂಮದೊಳ್ ಶಶಿಯಂದದಿ ।
ಭಾಜನಂ ಮಗಳೀಗ ಶೋಕಕೆ ತಾತನಿಂದಲೆಯಾಗಲೀ ॥ ೮ ॥

ಮಾಲತಿ—(ತನ್ನಷ್ಟಕ್ಕೆ) ಅಯ್ಯೋ ತಂದೆಯೇ ನೀನೂ ನನಗೆ ಹೀಗೆಮಾಡಿಯಾ! ದುರಾಶಯು ಮುಂದೆ ಯಾರ ಆಟವೂ ಸಾಗದು.

ಅವಲೋಕಿತೆ—ದೇವಿಯವರೇ ತಡವಾಗುತ್ತದೆ. ಆ ಸತ್ಪುರುಷನಾದ ಮಾಧವನ ಮನಸ್ಸಿಗೆ ಸ್ವಸ್ಥವಿಲ್ಲವಲ್ಲ.

ಕಾಮಂದಕೀ—ಒಳ್ಳೇದು. ಇನ್ನು ಮೇಲೆ ಹೋಗೋಣ. ಮಗಳೇ ಅಪ್ಪಣೆಕೊಡು.

ಲವಂಗಿಕೆ— (ಬದಿಗೆ) ಗೆಳತೀ ಮಾಲತೀ, ಈಗ ದೇವಿಯವರ ಕಡೆಯಿಂದ ಆ ಪುಣ್ಯಪುರುಷನ ಕುಲಶೀಲಗಳನ್ನು ತಿಳುಕೊಳ್ಳುವ.,

ಮಾಲತಿ—( ಬದಿಗೆ ) ನನಗಾದರೂ ಅದೇ ಕತೂಹಲವದೆ.

ಲವಂಗಿಕೆ— ( ಎಲ್ಲರೂ ಕೇಳುವಂತೆ ) ಈ ಮಾಧವನಲ್ಲಿ ದೇವಿಯವರದು ಬಹಳೇ ವಾತ್ಸಲ್ಯವಿದ್ದಂತೆ ತೋರುತ್ತದೆ. ಇವನಾರು?

ಕಾಮಂದಕಿ—ಆ ಕಥೆ ದೊಡ್ಡದದೆ. ಹೀಗೆ ಒಮ್ಮೆಲೇ ಹೇಳಲಾಸಲ್ಲ-

ಲವಂಗಿಕೆ—ಆದರೂ ದಯವಿಟ್ಟು ಹೇಳಬೇಕು.

ಕಾಮಂದಕಿ—ಕೇಳಿರಿ. ಎಲ್ಲ ಸತ್ಪುರುಷರ ಸಮೂಹವಲ್ಲಿ, ಚೂಡಾಮಣಿಯಂತೆ ಶೋಭಿಸುವ ದೇವರಾತರೆಂಬ, ವಿದರ್ಭರಾಜನ ಮಂತ್ರಿಗಳಿರುವರು. ಅವರು ಇಡೀಪೃಥ್ವಿಯಲ್ಲಿ ಬಹುಪುಣ್ಯಶಾಲಿಗಳು. ನಿನ್ನ ತಂದೆಯೂ ಅವರೂ

ಕೂಡೇ ಅಧ್ಯಯನ ಮಾಡಿದ್ದರಿಂದ ಅವರು ಎಂಥವರು ಯಾರೆಂಬುವದು ನಿನ್ನ ಪಿತನಿಗೆ ಗೊತ್ತದೆ. ಮತ್ತೆ.

॥ ವಲ್ಲಿಕಾವ್ಯ ॥

ದಿಕ್ಕು ದಿಕ್ಕಿನೊಳೆಲ್ಲ ಭಾಗದಿ ದೇವರಾತನ ಕೀರ್ತಿತಾ ।
ನುಕ್ಕುತಿರ್ಪುದು ಶೌರ್ಯಸಾಗರನಾತ ಸತ್ಕೃತಿಗಾತ್ರಯಂ ।
ಲೆಕ್ಕವಿಲ್ಲದ ವೈಭವಂ ಶುಭಕಾರ್ಯವಾತನ ಕೇತನಂ ।
ಮಿಕ್ಕಕಾಲದಿ ಲೋಕದಲ್ಲಿವರೆಂದಿಗೂ ಜನಿಸರ್ ಸದಾ ॥ ೯ ॥

ಮಾಲತಿ— (ಆನಂದದಿಂದ) ಈಗ ದೇವಿಯವರು ಹೇಳಿದವರು ಅಪ್ಪನ ಸ್ಮರಣೆಯುಳ್ಳರಬಹುದಲ್ಲವೇ ?

ಲವಂಗಿಕೆ—ದೇವಿಯವರೂ ಅವರೂ ಕೂಡೇ ವಿದ್ಯಾಭ್ಯಾಸ ಮಾಡಿದ ರೆಂದು ಆಕಾಲದ ಸಂಗತಿಗಳನ್ನು ಬಲ್ಲವರು ಹೇಳುತ್ತಾರೆ.

॥ ಚಂಪಕ ॥

ಸಕಲ ಕಲಾವಿದಂ ಜನಿಸಿಯಾತನೊಳೀ ಗುದಯಾದ್ರಿಯಿಂದತೀ ।
ಜಕಲೆಯೆ ಪುಟ್ಟಿದಂತೆ ಪೊಳೆಯುತ್ತಿಹನೀ ಜಗದಲ್ಲಿ ಸುಂದರಂ ।
ಕಕುಲತೆಯಿಂದ ನೋಡುವವರೋಳ್ ಮುದಜೀರುವ ಪ್ರೀತಿಪಾತ್ರನಾ ।
ಗಿ ಕುವಲಯಾಣ್ಮ ಭೂಮಿಯೊಳು ನೂತನರೂಪದಿ ಪುಟ್ಟಿ
ದಂದದೀ ॥ ೧೦ ॥

ಲವಂಗಿಕೆ—(ಬದಿಗೆ) ಅವನು ಮಾಧವನೇ ಆಗಬಹುದೇ?

ಕಾಮಂದಕಿ—

॥ ತರಲ ॥

ಸದನದಿಂ ಪೊರಮಟ್ಟು ಬಾಲ್ಯನೊಳೆಲ್ಲ ವಿದ್ಯಗಳನ್ನುತಾ ।
ಮುದದೊಳಾರ್ಜನಮಾಡಿ ಬಂದಿಹನಿಲ್ಲಿ ಪೌರ್ಣಿಮೆ ಚಂದ್ರನಂ ।
ದದಲಿ ಶೋಭಿಸುತಿರ್ಪಬಾಲನ ನೋಡುತೆಲ್ಲರು ಬಾಲೆಯರ್ ।
ಬೆದರಿದೇಣಿಯ ನೋಟದಿಂದೆ ಗವಾಕ್ಷಮಾರ್ಗದಿ ತುಂಬುವರ್ ॥೧೧॥

ಅವನು ಈಗ ಇಲ್ಲಿ ತನ್ನ ಬಾಲಮಿತ್ರನಾದ ಮಕರಂದನನ್ನು ಕೂಡಿ ಕೊಂಡು ಅನ್ವೀಕ್ಷಕಿಯನ್ನು ಅಧ್ಯಯನ ಮಾಡುತ್ತಿರುವನು.

ಮಾಲತಿ—(ಆನಂದದಿಂದ—ಬದಿಗೆ) ಆ ಭಾಗ್ಯಶಾಲಿಯು ದೊಡ್ಡ ಕುಲದಲ್ಲಿ ಹುಟ್ಟಿದವನಂತೆ. ಕೇಳಿದಿಯಃ.

ಲವಂಗಿಕೆ— (ಬದಿಗೆ) ಮಹಾಸಾಗರವನ್ನು ಬಿಟ್ಟು ಪಾರಿಜಾತವು ಎಲ್ಲಿ ಹುಟ್ಟುವದು.

ಕಾಮಂದಕಿ— ಛೀ। ವ್ಯರ್ಥಹೊತ್ತುಗಳೆದೆನು.

॥ ವುತ್ಪಲಮಾಲೆ ॥

ಸಂಧ್ಯಯು ಶಂಖನಾದ ರತಿಸಂಗರ ನಂತರನಿದ್ರೆಗೆಯ್ದುದಂ।
ಸುಂದರ ಚಕ್ರವಾಕಮತಿ ಭೀತಿಯಪುಟ್ಟಿಸು ತೆಬ್ಬಿಸಿರ್ಪುದು।
ಸೌಧಗಳಲ್ಲಿ ಪೊಳ್ಳುಗಳಶೇರುತೆ ದೀರ್ಘನಿನಾದದಿಂದೆ ಮೇಣ್।
ಕುಂದದೆ ಮೇಲಕೇಳುತಿಹುದಂಬರವಂ ಭರದಿಂದೆ ತುಂಬಲಾ ॥ ೧೨ ॥

ಮಗಳೇ ಸುಖದಿಂದಿರು. (ಹೀಗೆಂದು ಏಳುತ್ತಾಳೆ.)

ಮಾಲತಿ—(ಬದಿಗೆ) ತಂದೆಯು ನನ್ನನ್ನು ಅರಸನಿಗೆ ಆಹುತಿಕೊಟ್ಟನು ದೊರೆಗಳ ಪ್ರೀತಿಸಂಪಾದನೆಯು ಅರಸನಿಗೆ ಹೆಚ್ಚಿನದಾಯಿತು. ಮಾಲತಿಯ ದೇನೂ ಬೆಲೆಯಿಲ್ಲ. (ಅಳುತ್ತ) ಅಯ್ಯೋ ಅಪ್ಪನೇ ನೀನು ಸಹ ನನಗೆ ಹೀಗ ಮಾಡಿದಿಯಾ? ದುರಾಶಯು ಮುಂದೆ ಯಾರ ಆಟವೂ ಸಾಗದು. (ಆನಂ ದಿಂದ) ಏನು ಅವನು ಒಳ್ಳೇ ಕುಲದಲ್ಲಿ ಹುಟ್ಟಿರುವನಂತೆ! ಸಮುದ್ರವನ್ನು ಬಿಟ್ಟು ಪಾರಿಜಾತವು ಎಲ್ಲಿ ಹುಟ್ಟುವದೆಂದು ನನ್ನ ಪ್ರೀತಿಯ ಗೆಳತಿಯು ಬ ಚತುರತೆಯಿಂದ ಮಾತಾಡಿದ್ದು ನಿಜವು. ಅವನು ಮತ್ತೊಮ್ಮೆ ನನಗೆ ಕಾ ಬಹುದೇ?

ಲವಂಗಿಕೆ—ಅವಲೋಕಿತೆ ಇತ್ತ, ಈ ಚೌಕಿನೊಳಗಿಂದ ಹೋಗುವ ಬ

ಕಾಮಂದಕಿ— (ಬದಿಗೆ) ಅವಲೋಕಿತೇ, ಭಾಮ, ನಾನು ಬದಿ ಉಳಿದಿರಲು, ನಾನು ಮಾಲತಿಯ ಮೇಲಿಂದ ಪೊತ್ತುಕೊಂಡ ಭಾರವು ಹ ಗಾಯಿತು.

॥ ಚಂಪಕ ॥

ವರನೊಳು ದೋಷ ತೋರಿಸುತೆ ಸಂಶಯ ತಂದೆಯೊಳಾಕೆಯಲ್ಲಿ ತಾ ।
ಬರುವ ಕಠೋರ ಮಾತುಗಳ ಪೇಳಿದೆ ಮುಂದವಳಿನ್ನು ಕಾರ್ಯಮಂ ।
ಜರಗಿಸತಕ್ಕ ಮಾರ್ಗವಿತಿಹಾಸದರೂಪದಿ ಪೇಳಿಬಿಟ್ಟೆನೀ ।
ಗರುವಿದೆ ಬಾಲಸದ್ಗುಣಸುವಂಶವನಾತನನಿನ್ನು ತೋರಿಪೇಂ ॥ ೧೩ ॥

( ಎಲ್ಲರೂ ಹೋಗುತ್ತಾರೆ )

**ಎರಡನೆಯ ಅಂಕ ಮುಗಿಯಿತು.**

———o———

# ೩ನೆಯ ಅಂಕವು.

( ಬುದ್ಧರಕ್ಷಿತೆಯು ಬರುತ್ತಾಳೆ. )

ಬುದ್ಧರಕ್ಷಿತೆ—( ಅಡ್ಡಾಡಿ ಮೇಲಕ್ಕೆ ಮೋರೆಮಾಡಿ ) ಅವಲೋಕಿತೇ, ದೇವಿಯವರು ಎಲ್ಲಿರುವರು ನಿನಗೆ ಗೊತ್ತದೆಯೋ ?

ಅವಲೋಕಿತೆ—( ಪ್ರವೇಶಮಾಡಿ ) ಬುದ್ಧಿರಕ್ಷಿತೇ, ನಿನಗೆ ಮೈಮೇಲೆ ಎಚ್ಚರಿಲ್ಲವೇ ? ದೇವಿಯವರು ಮಾಲತಿಯಕೂಡ ಹೋಗಿ ಎಷ್ಟೋ ಹೊತ್ತಾಯಿತು. ಊಟದ ವೇಳೆ ಸಹ ಮೀರಿಹೋಯಿತು.

ಬುದ್ಧರಕ್ಷಿತೆ—ಹೂಂ, ನೀನೆಲ್ಲಿ ಹೊರಟೆ ?

ಅವಲೋಕಿತೆ—ನನಗೆ ದೇವಿಯವರು ಮಾಧವನ ಕಡೆಗೆ ಹೋಗ ಹೇಳಿರುವಳು. ಶಂಕರಪುರದ ಮದನೋದ್ಯಾನಕ್ಕೆ ಹೋಗಿ ಹುವ್ವಿನ ಬಳ್ಳಿಗಳಿಂದ ಹೊದಿಸಿದ ಕೆಂಪು ಅಶೋಕದ ಜಿಡುಪಿನಲ್ಲಿ ಅವನಿಗೆ ನಿಲ್ಲಲಿಕ್ಕೆ ಹೇಳಿರುವರು. ಮಾಧವನೂ ಅಲ್ಲಿ ಹೋಗಿರುವನು.

ಬುದ್ಧರಕ್ಷಿತೆ—ಮಾಧವನನ್ನು ಅಲ್ಲಿ ಏಕೆ ಕಳಿಸಿರುವರು.

ಅವಲೋಕಿತೆ—ಈ ಹೊತ್ತು ಕೃಷ್ಣಚತುರ್ದಶಿ ಯಿರುವದರಿಂದ ಮಾಲತಿಯು ಜನನಿಯನ್ನು ಕೂಡಿಕೊಂಡು ಶಂಕರಪುರಕ್ಕೆ ಹೋಗುವಳು. ದೇವರ ಪೂಜೆಗೆ ತನ್ನ ಕಯ್ಯಿಂದಲೇ ಹೂವುಗಳನ್ನಾರಿಸಿದರೆ ಸೌಭಾಗ್ಯವು ಹೆಚ್ಚಿಸುವದೆಂದು ಲವಂಗಿಕೆಯನ್ನು ಜೊತೆಮಾಡಿ ಮಾಲತಿಯನ್ನು ಅದೇ ಮದನೋದ್ಯಾನಕ್ಕೆ ಕರದೊಯ್ಯುವಳು. ಅಲ್ಲಿ ಒಬ್ಬರನ್ನೊಬ್ಬರು ನೋಡುವರು. ನೀನೆಲ್ಲಿ ಹೊರಟೆ ?

ಬುದ್ಧರಕ್ಷಿತೆ— ಶಂಕರಪುರಕ್ಕೇ ಹೊರಟೆ. ನನ್ನ ಪ್ರೀತಿಯ ಗೆಳತಿಯಾದ ಮದಯಂತಿಕೆಯು ನನಗೂ ಅತ್ತಕಡೆಗೆ ಬರಹೇಳಿರುವಳು. ದೇವಿಯವರ ಪಾದಕ್ಕೆ ಬಿದ್ದು ನಾನೂ ಅತ್ತಕಡಿಗೇ ಹೋಗುವೆನು

ಅವಲೋಕಿತೆ— ದೇವಿಯವರು ನಿನಗೆ ಒಪ್ಪಿಸಿದ ಕೆಲಸದ ವೃತ್ತಾಂತವೇನು?

ಬುದ್ಧರಕ್ಷಿತೆ— ನಾನಾದರೂ ದೇವಿಯವರ ಅಪ್ಪಣೆಯ ಮೇರೆಗೆ, ನನ್ನ ಪ್ರೀತಿಯ ಗೆಳತಿಯಾದ ಮದಯಂತಿಕೆಯು ಕೂಡ ನಂಬಿಗೆಯ ಮಾತುಗಳನ್ನಾಡುವಾಗ್ಗೆ ಮಕರಂದನು ಇಂಥವನು ಅಂಥವನು ಎಂದು ಹೇಳಿ ಹೇಳಿ ಅವನನ್ನು ನೋಡದಿದ್ದರೂ ಅವನ ಮೇಲೆ ಅವಳ ಪ್ರೀತಿಯನ್ನು ಬಹಳವಾಗಿ ಹುಟ್ಟಿಸಿರುವೆನು. ಈಗ ಅವಳು ಅವನನ್ನು ಯಾವಾಗ ಕಂಡೇನೆಂದು ಹಾತೊರೆಯುತ್ತಿರುವಳು.

ಅವಲೋಕಿತೆ— ಶಹಾಬಾಸು, ಬುದ್ಧರಕ್ಷಿತೆ ಶಹಾಬಾಸು. ನಡೆಪೋಗುವ.

( ಇಬ್ಬರೂ ಹೋಗುತ್ತಾರೆ )

**ಪ್ರವೇಶ ಸಂಪೂರ್ಣ**

---

( ಪ್ರವೇಶ ಮಾಡಿ )

ಕಾಮಂದಕಿ—

॥ ಕಂದ ॥

ಮಾಲತಿವಿನಸುಮಿದಪ್ಪವೆ।
ಕಾಲದಿ ನಮ್ರತೆಯುಬಿಟ್ಟು ಗೆಳೆತನ ವಾಯ್ತಾ।
ಬಾಲಿಕೆ ನನ್ನೊಳಗೀಗತಿ।
ಲೋಲತೆಯಿಂ ನಂಬಿ ಗುಟ್ಟ ನೆಲ್ಲವ ಪೇಳ್ವಳ್ ॥೧॥

ಈಗಂತೂ—

॥ ಉತ್ಪಲ ॥

ನನ್ನನು ಬಿಟ್ಟು ರಂಜಿಸಳು ಸಂನಿಧಿಯೋಳ್ ಮುದದಿಂದಲಿರ್ಪಳು।
ಮನ್ನಿಸುತೆನ್ನಪೇಳುವಳು ಗುಟ್ಟಿನ ಮಾತುಗಳೆಲ್ಲ ಪ್ರೇಮದಿಂ।
ತನ್ನಯತೋಳ್ಗಳಿಂಬಿಗಿದು ಕಂಠದೊಳೇಳಲು ಬೇಡೆನುತ್ತೆ ತಾ।
ಬನ್ನಿರಿ ಬೇಗದಿಂದೆನುತೆ ನನ್ನೊಳಗಾಣೆಯ ನಿಕ್ಕಿಪೇಳ್ವಳು ॥೨॥

ನಮ್ಮ ಕಾರ್ಯಗಳು ಕೊನೆಗಾಣುವವೆಂದು ಅನಿಸಲಿಕ್ಕೆ ಬಲವತ್ತರವಾದ ಕಾಣವೇದಂನರೆ

॥ ಚಂಪಕ ॥

ಪರಮುಖದಿಂದೆ ಬೇರೆತರದಿಂದಲು ಕೇಳಿ ಶಕುಂತಲಾದಿಗಳ್ ।
ಜರಗಿಸಿದಂಥ ಸಾಹಸದ ಕಾರ್ಯಗಳಂ ಮನದಲ್ಲಿ ತಂದು ತಾ ।
ನಿರಿಸುತೆ ತನ್ನಗಾತ್ರವ ಮದಂಕದೊಳುನ್ನತ ಚಿಂತೆಯಲ್ಲಿಯೇ ।
ಮರೆಯುತ ತನ್ನನೇ ಸ್ತಿಮಿತಳಾಗುವಳಾಕೆ ಯನೇಕಕಾಲದೋಳ್ ॥೩॥

ಕಾರಣ ಈ ಹೊತ್ತು ಮಾಧವನ ಕಣ್ಣುಮುಂದೇ ಮುಂದಿನ ಕೆಲಸಕ್ಕೆ ಹತ್ತುವ. ( ಪಡದೆಯ ಕಡೆಗೆ ನೋಡಿ ) ಮಗಳೇ ಇತ್ತಬಾ.

( ಮಾಲತಿಯೂ ಲವಂಗಿಕೆಯೂ ಬರುತ್ತಾರೆ )

ಮಾಲತಿ— ( ತನ್ನಷ್ಟಕ್ಕೆ ) ಅಪ್ಪನು ನನ್ನನ್ನು ಅರಸನಿಗೆ ಆಹುತಿಕೊಟ್ಟನೇ! ಧೊರೆಗಳ ಪ್ರೀತಿಯು ಅಪ್ಪನಿಗೆ ಹೆಚ್ಚಿನದಾಯಿತು. ಮಾಲತಿಯದೇನೂ ಬೆಲೆ ಇಲ್ಲ. ( ಅಳುತ್ತ ) ಅಯ್ಯೋ ತಂದೆಯೇ ನೀನೂ ನನಗೆ ಹೀಗೆ ಮಾಡಿದಿಯಾ? ಮರಾಶಯು ಮುಂದೆ ಯಾರ ಆಟವೂ ಸಾಗುವದಿಲ್ಲ. ( ಆನಂದದಿಂದ ) ಏನು! ಅವನು ಒಳ್ಳೇ ಕುಲದಲ್ಲಿ ಹುಟ್ಟಿದವನಂತೆ! ಸಮುದ್ರವನ್ನು ಬಿಟ್ಟು ಪಾರಿಜಾತವು ಎಲ್ಲಿ ಹುಟ್ಟುವದೆಂದು, ನನ್ನ ಪ್ರೀತಿಯು ಗೆಳತಿಯು ಬಲು ಚತುರತೆಯಿಂದ ಹೇಳಿದಳು. ಅವನು ಇನ್ನೊಮ್ಮೆ ನನಗೆ ಕಾಣಬಹುದೇ !

ಲವಂಗಿಕೆ— ಗೆಳತೀ, ಮನೋಹರವಾದ ಸುಗಂಧ ರಸದಿಂದ ತೊಯ್ದ ಚಿಗುರನ್ನು ತಿನ್ನುವ ಮರಿಗೋಗಿಲೆಗಳ ಸಮೂಹದ ಕೋಲಾಹಲದಿಂದ ಮಾವಿನ ಮರವು ತುಂಬಿದೆ. ಅದರ ತುದಿಯಿಂದ ಹಾರಿದ ಚಪಲ ಗುಂಗೀಹುಳಗಳ ಪಟ್ಟಣಿಯಿಂದ ಸಂಪಿಗೆಯ ಎಸಳುಗಳು ಉದುರುತ್ತವೆ. ಅವುಗಳ ಅಪ್ರತಿಮವಾದ ಸುವಾಸನೆಯಿಂದ ಮದನೋದ್ಯಾನವ ತಂಗಾಳಿಯು ಮನೋಹರವಾಗಿದೆ ಹಂಸಗಳ ದೊಡ್ಡ ಜಘನಗಳ ಭಾರದಿಂದ ಅವುಗಳ ತೊಡೆಗಳ ಗತಿಯು ಮಂದವಾಗಿದೆ. ಚಂಚಲವಾದ ಮತ್ತು ತಪ್ಪಿಬೀಳುವ ಹೆಜ್ಜೆಗಳಿಂದ ಅವುಗಳಲ್ಲಿ ಹುಟ್ಟಿದ ಬೆವರಿನ ಶೀತಾಮೃತದಿಂದ ತಂಗಾಳಿಯು ನಿನ್ನ ಆಲ್ಹಾದಕರವಾದ ಮುಖಚಂದ್ರಕ್ಕೆ ಚಂದನದಂತೆ ಸುಖಸ್ಪರ್ಶ ಕೊಡುತ್ತದೆ. ಕಾರಣ ಅತ್ತ ಕಡಿಗೇ ಹೋಗುವ ನಡೆ.

( ಅಡ್ಡಾಡಿ ತೋಟದಲ್ಲಿ ಸೇರುವರು. )

( ಮಾಧವನು ಬರುತ್ತಾನೆ. )

ಮಾಧವ— ಎಲ, ದೇವಿಯು ಎದುರಿನಲ್ಲಿಯೇ ಬಂದಳಲ್ಲ.

॥ ಚಂಪಕ ಮಾಲೆ ॥

ಸಖಿಯಳ ಮುನ್ನ ಸಮ್ಮುಖದಿ ತೋರುತ ದೇವಿಯು ನನ್ನನೀಗ ತಾ ।
ಸುಖದೊಳಗಿಟ್ಟು ಪ್ರಾಣವನೆ ನೀಡುವಳೆನ್ನೊಳಗೀಕೆ ತಾಪದಿಂ ।
ಶಿಖಿಬಳಲುತ್ತಿರಲ್ ಘನ ನಿದಾಘಗದ ಕಾಲದಿ ಮುಂದೆ ಚಂಚಲಾ ।
ಮುಖತಲೆದೋರಿ ಸೂಚಿಸುವ ವೃಷ್ಟಿಯ ನೀಗನುಕಾರಮಾಡಿದಳ್ ॥೪॥

ಆಹ! ಲವಂಗಿಕೆಯನ್ನು ಕೂಡಿಕೊಂಡು ಮಾಲತಿಯೂ ಬಂದಿರುವಳು. ಇದೇನಾಶ್ಚರ್ಯವು !

॥ ಮಲ್ಲಿಕಾ ॥

ನೀಲಲೋಚನೆ ನಿರ್ಮಲೆಂದು ವಿನಂತೆ ಸಮ್ಮುಖದಲ್ಲಿರಲ್ ।
ಮೇಲೆ ಮೇಲಿದು ಮಾನಸಂಮನು ಜಾಡ್ಯಹೊಂದುತಲಿರ್ಪುದು ।
ಮೇಲು ಪಂಕ್ತಿಯ ಚಂದ್ರಕಾಂತನು ಭೂಧರಾಂಗದಿ ಪುಟ್ಟಿ ತಾ ।
ಲೋಲನಾಗಿಯು ನೀರುತೋರುವ ಮಾಳ್ಕೆ ಮನ್ಮನಕಾಯಿತು ॥೫॥

ಮಾಲತಿಯು ಈಗ ಮೊದಲಿನಗಿಂತ ಹೆಚ್ಚು ಚಂದ ಕಾಣುವಳು.

॥ ವಸಂತ ತಿಲಕ ॥

ಬಾಡಿರ್ದ ಚಂಪಕದ ಮಾಲೆಯು ಶೋಭೆಯಿಂ ತಾ ।
ಕೂಡಿರ್ದು ಬಾಲೆ ಮದನಾಗ್ನಿಯ ಪೆಚ್ಚಿಸೆನ್ನೊಳ್ ।
ಮೂಢತ್ವಮಂ ಹೆದೆಯದೊಳ್ನೆಲೆ ಗೊಳ್ಳಿಸಿರ್ಪಳ್ ।
ನೀಡುತ್ತೆ ಕಣ್ಗೆ ಮಮ ಸಾಫಲಮಂ ಕೃಶಾಂಗೀ ॥ ೬ ॥

ಮಾಲತಿ— ಗೆಳತೀ, ಈ ಹೂವಿನ ಲತಾಮಂಟಪದಲ್ಲಿ ಪುಷ್ಪಗಳನ್ನು ಆರಿಸುವ ಬಾ.

ಮಾಧವ—

॥ ಚಂಪಕ ॥

ಮೊದಲಿಗೆ ಕೇಳಿ ಕಾಂತೆಯುಳ ವಾಣಿಯುನೆನ್ನೊಳು ಪ್ರೇಮದಿಂದಲೀ ।
ಗುದಯಿಪ ರೋಮಗಳ್ ನನಗೆ ಮೇಘದ ಪಂಕ್ತಿಗಳಿಂದ ಸೇಚಿಸಿ ।

ರ್ಜದಕದಿ ಸಂತಸಂಬಡುವ ವೊಗ್ಗೆಯ ತಾಳ್ದಕದಂಬವೃಕ್ಷದಂ ।
ದದಿಮುದ ಬೀರುತಿರ್ಪವು ಮನೋಹರ ರೂಪವು ಮುಂದೆ ನಿಂತಿರಲ್॥೭॥

ಲವಂಗಿಕೆ—ಗೆಳತೀ ಹಾಗೇ ಮಾಡುವ.

( ಹೂವುಗಳನ್ನು ಆರಿಸಿದಂತೆ ನಟಿಸುತ್ತಾರೆ. )

ಮಾಧವ—ದೇವಿಯವರ ತಂತ್ರಗಳು ಅಗಾಧವಾದವೂ ಆಶ್ಚರ್ಯಕರವಾದವೂ ಇರುತ್ತವೆ.

ಮಾಲತಿ—ಗೆಳತೀ, ಮತ್ತೊಂದೆಡೆಯಲ್ಲಿ ಹೂವುಗಳನ್ನಾರಿಸುವ ನಡೆ.

ಕಾಮಂದಕಿ—(ಮಾಲತಿಯನ್ನು ಅಪ್ಪಿಕೊಂಡು) ಏನೇ, ಬಿಡು, ಬಿಡು, ನೀನು ಈ ಶ್ರಮವನ್ನು ತಾಳಲಾರೆ.

॥ ಉತ್ಪಲಮಾಲಾ ॥

ಸಮ್ಮುಖದಲ್ಲಿ ಪ್ರಾಣಪತಿಯನ್ನರೆ ಕಂಡವಳಂತೆ ನಿನ್ನೊಳೀ ।
ಗಂ ಮುಖಚಂದ್ರನಲ್ಲಿ ತಲೆದೋರಿತು ಸ್ವೇದಜಲಂ ವಚಂಗಳೀ ।
ಗಂ ಮುದದಿಂದೆ ಕಂಪಿಸುತಲಿಂದ್ರಿಯಗಳ್ ಬಿಡದೆಲ್ಲ *ಖೇದದಿಂ ।
ಗನ್ಮನೆ ಬಾಡಿನೇತ್ರಗಳು ಮುಚ್ಚುತಲಿರ್ಪವು ಸುಭ್ರು ನಿನ್ನೊಳೂ ॥೮॥

( ಮಾಲತಿಯು ನಾಚಿದಂತೆ ನಟಿಸುತ್ತಾಳೆ )

ಲವಂಗಿಕೆ—ದೇವಿಯವರು ಬಲು ಸೊಗಸಾಗಿ ಅಪ್ಪಣೆ ಕೊಡಿಸಿದರು.

ಮಾಧವ—ಈ ಚೇಷ್ಟೆಯು ಮನಸ್ಸಿನಲ್ಲಿ ನಡುವಂತಿದೆ.

ಕಾಮಂದಕಿ—( ಆದುದರಿಂದ ) ಕೂಡ್ರು. ಕೆಲವು ಹೇಳತಕ್ಕ ಮಾತುಗಳವೆ. ಅವನ್ನು ಹೇಳುತ್ತೇನೆ.

( ಎಲ್ಲರೂ ಕೂಡ್ರುವರು )

ಕಾಮಂದಕಿ—(ಮಾಲತಿಯ ಗದ್ದವನ್ನು ಎತ್ತಿ) ಏನೇ ಸುದೈವಿಯೇ ಈ ಆಶ್ಚರ್ಯಕರವಾದ ಮಾತನ್ನು ಕೇಳು.

ಮಾಲತಿ—ಲಕ್ಷಗೊಟ್ಟಿರುವೆನು.

---

* ಶ್ರಮ.

ಕಾಮಂದಕಿ—ಮಾಧವನೆಂಬ ಹೆಸರಿನ ಒಬ್ಬ ಕುಮಾರನಿರುವನೆಂದು ಒಂದಾನೊಂದು ಪ್ರಸಂಗದಲ್ಲಿ ನಾನು ಹೇಳಿರುವೆನು. ನಿನ್ನ ಮೇಲಿದ್ದಂತೆ ಅವನ ಮೇಲಾದರೂ ನನ್ನ ಪೂರ್ಣ ಪ್ರೀತಿಯುದೆ.

ಲವಂಗಿಕೆ—ಅದೂ ನಮಗೆ ನೆನಪದೆ.

ಕಾಮಂದಕಿ—ಅವನು ಮದನೋದ್ಯಾನದ ಜಾತ್ರೆಯ ದಿವಸದಿಂದ ಮನಸ್ಸಿಗೆ ಸ್ವಸ್ಥವಿಲ್ಲದೆ ಶರೀರಕ್ಲೇಶದಿಂದ ಪರವಶನಾದಂತಿರುವನು. ಯಾಕೆಂದರೆ—

॥ ಶಾರ್ದೂಲವಿಕ್ರೀಡಿತಂ ॥

ಇಳೆಯೋಳ್ ಮೋದವನಾತನೋಳ್ ಪೆರೆಯು ಜೀರಂ ಪ್ರೇಮ ಪಾತ್ರಂಗಳಿಂ
ಕಳೆಯೇರಲ್ಪತಿಧೀರ ನಿರ್ದು ಮನದಂತಸ್ತಾಪಮಂ ತೋರ್ಪನು ।
ಬಿಳಿ ಮೈಬಣ್ಣವು ಕಾಣುತಿರ್ಪುದವನೋಳ್ ಶ್ಯಾಮಾಂಗನಾಗಿರ್ದರೂ ।
ಅಳಿಯುತ್ತಿರ್ದರು ಕಾಯವಾತನೊಳು ಸೌಂದರ್ಯಾನ್ವಿತಂ ತೋರ್ಪುದು॥೯

ಲವಂಗಿಕೆ—ಆ ವೇಳೆಯಲ್ಲಿ ಅವಲೋಕಿತೆಯು ದೇವಿಯವರಿಗೆ ತ್ವರೆ ಮಾಡಹೇಳಿದಳು. ಅದಕ್ಕಾದರೂ ಮಾಧವನ ಶರೀರದ ಅಸ್ವಸ್ಥವೇ ಕಾರಣವು.

ಕಾಮಂದಕಿ—ಮಾಲತಿಯೇ ಇವನ ಮದನ ತಾಪಕ್ಕೆ ಕಾರಣಳಾಗಿರುವಳೆಂದು ಕೇಳಿರುವೆನು. ನನಗಾದರೂ ಅದೇ ನಿಜವಿದ್ದಂತೆ ತೋರುತ್ತದೆ. ಯಾಕಂದರೆ—

॥ ಉತ್ಪಲಮಾಲಾ ॥

ಈ ಮುಖಚಂದ್ರ ಮಿಾಗ ನಿಜದಿಂದಲೆ ಪ್ರೀತಿಗೆ ಪಾತ್ರನನ್ನು ತಾ ।
ಸಮ್ಮುಖದಲ್ಲಿ ಕಂಡಿರುವದಾತನ ಚಿತ್ತವು ಶಾಂತಿಸಾಗರಂ ।
ತಾ ಮರುತಂಗೆ ತನ್ನೊಡಲನೊಡ್ಡಿ ತರಂಗಗಳಲ್ಲಿ ಸಿಲ್ಕಿದಂ ।
ತಾ ಮಗು ಕಾತರಂಬಡುವ ಮಾನಸದಲ್ಲಿರುವಾತುರತ್ವದಿಂ ॥ ೧೦ ॥

ಮಾಧವ—ಅಹೋ! ಇವರ ಮಾತುಗಳು ಎಷ್ಟು ಸಮಂಜಸವಿರುವವು. ನನ್ನನ್ನು ಬೆಳಿಸಿ ಹೇಳುವದರಲ್ಲಿ ಎಷ್ಟು ಪ್ರಯತ್ನಮಾಡುತ್ತಿರುವರು. ಅಥವಾ

॥ ಚಂಪಕ ॥

ಅರಿತವರೆಲ್ಲ ಶಾಸ್ತ್ರಗಳ ಪೇಳುವ ಶಕ್ತಿ, ನಿಸರ್ಗದಿಂದಿರಲ್ ।
ಗುರುತರ ಮಾತಿನಿಂ ವಚನ ಮುತ್ತನು ಪದ್ಧತಿಯಲ್ಲಿ ರೂಢಿಸಿ ।

ರ್ದರಿಯುತ ಕಾಲವುಂ ಮುದದಿ ನೂತನ ಕಾರ್ಯಗಳಲ್ಲಿ ಕೋವಿದರ್ ।
ಓದಿಯರು ಕಾಮಿತಾರ್ಥಗಳ ನೀ ಗುಣದಾಶ್ರಯದಿಂದೆ ಸಾಧಿಪರ್ ॥ ೧೧ ॥

ಕಾಮಂದಕಿ—ಈಗ ಅವನಿಗೆ ಜೀವವೇ ಬೇಸರವಾಗಿದೆ. ಅವನು ಮಾಡದ ಕಠಿಣ ಕೆಲಸಗಳು ಯಾವವೂ ಉಳಿದಿಲ್ಲ.

॥ ಉತ್ಪಲಮಾಲಾ ॥

ಕೋಕಿಲೆ ಮಂಜುಳ ಸ್ವರದಿ ಕೂಗುತ ತಾ ಮೃದು ಪಲ್ಲವಂಗಳೋಳ್ ।
ನೂಕುವ ಕಣ್ಗಳಂನದರೊಳಾತನು ಕೇಸರ ಗಂಧಪೊತ್ತಲರ್ ।
ಬೇಕೆನುತಂಗವನ್ನದು ಬರುತ್ತಿರಲೊಡ್ಡುವ ಚಂಪ್ರತಾಪದಿಂ ।
ತಾ ಕೊರಗುತ್ತಿಹಂ ಮೃದುಲ ತಾವರೆಯಂ ಪೊಸೆಯುತ್ತೆ ಸಾವಿಗೆ ॥ ೧೨ ॥

ಮಾಲತಿ—ಅವನು ಇಂಥ ಕಠಿಣ ಕೆಲಸಗಳನ್ನು ಮಾಡುವನೇ ?

ಕಾಮಂದಕಿ—ಪಾಪ! ಆ ಕೋಮಲಾಂಗನಾದ ಕುಮಾರನು ಇಂಥ ದುಃಖವನ್ನು ಪೂರ್ವದಲ್ಲಿ ಎಂದೂ ಅನುಭವಿಸಿದವನಲ್ಲ. ಇದರಿಂದ ಅವನು ಒಂದು ವೇಳೆ ಜೀವಕ್ಕೆ ಸಹ ಎರವಾಗಬಹುದು.

ಮಾಲತಿ—ನನ್ನ ದೆಸೆಯಿಂದ ಮರ್ತ್ಯಲೋಕಕ್ಕೆ ಅಲಂಕಾರದಂತಿರುವ ಆ ಪುರುಷನಿಗೆ ಅಪಾಯವಾದೀತೆಂದು ಅಂಜಿಕೆ ಬರುತ್ತದೆ ಏನಾಗುತ್ತದೋ ಏನೋ ನನಗೆ ತಿಳಿಯದು.

ಮಾಧವ—ದೇವಿಯವರಿಗೆ ನನ್ನ ಬಗ್ಗೆ ಕನಿಕರ ಬಂತು.

ಲವಂಗಿಕೆ—ದೇವಿಯವರೇ, ಈ ಮಾತುಗಳನ್ನೆಲ್ಲ ಹೇಳುತ್ತೀರಿ. ಅಂದ ಮೇಲೆ ನಾನು ಹೇಳುವ ಮಾತುಗಳನ್ನಷ್ಟು ಕೇಳಿರಿ. ನನ್ನೊಡತಿಯಂತೂ ಮುನಿಯು ಬದಿಯ ಬೀದಿಗೆ ತುಸು ಹೊತ್ತು ಅಲಂಕಾರದಂತೆ ಶೋಭಿಸುವ ಅವನನ್ನೇ ಮೇಲಿಂದಮೇಲೆ ನೋಡುವಳು. ಸೂರ್ಯನ ಕಿರಣಗಳಿಂದ ಕೂಡಿದ ಸುಂದರವಾದ ಎಳೇ ಕಮಲದಂತೆ ಶೋಭಿಸುವ, ಅವನ ಅವಯವಗಳ ಸೌಂದರ್ಯವನ್ನು ನೋಡುವದರಿಂದ ತನಗಾಗುವ ಕಾಮಬಾಧೆಯನ್ನು ವ್ಯಕ್ತಪಡಿಸುವಳು. ಈ ಮದನ ತಾಪದಿಂದ ಅವಳು ಹೆಚ್ಚು ಚಂದ ಕಾಣುತ್ತಿದ್ದರೂ ನಮ್ಮಂಥ ಆಶ್ರಿತ ಹೆಂಗೆಳೆಯರಿಗೆ ಅದರಿಂದ ವ್ಯಸನವಾಗುತ್ತದೆ. ಆಟನೋಟ

ಗಳಲ್ಲಿ ಅವಳ ಮನಸಿಲ್ಲ- ಅವಳು ತನ್ನ ಸುಂದರವಾದ ಬಾಡಿದ ಕೆಂಪನ್ನ ಕೈ ಮೇಲೆ ತಲೆ ಇಟ್ಟುಕೊಂಡೇ ದಿವಸಗಳನ್ನು ಕಳೆಯುವಳು. ಆ ಹೂದೋಟದ ಕಡೆಯ ಗಾಳಿಯು ಅರಳಿದ ಕಮಲದ ಮಕರಂದವನ್ನು ಕೂಡಿಕೊಂಡದ್ದರಿಂದ ಮನೋಹರವಾಗಿರುತ್ತದೆ. ಅದು, ಅರಳಿದ ಮಲ್ಲಿಗೆಯು ಮತ್ತು ಮಾವಿನ ಹುವ್ವುಗಳಿಂದ ಹೊರಬೀಳುವ ಅಮೃತಬಿಂದುಗಳ ರಾಶಿಯನ್ನೇ ಹೊತ್ತುತರುವ ಕಾರಣ ಅದರ ಸ್ಪರ್ಶದಿಂದ ತಳಮಳಿಸುವಳು. ಇದಲ್ಲದೆ, ಆ ದಿವಸ, ತನ್ನ ಉತ್ಸವವನ್ನೇ ನೆರವೇರಿಸುವದನ್ನು ನೋಡುವದಕ್ಕೆ ರೂಪಧರಿಸಿ ಕಾಮೋದ್ಯಾನಕ್ಕೆ ಭೂಷಣನಾಗಿ ಬಂದ ಮನ್ಮಥನಂತೆ ತೋರಿದ ಮಾಧವನನ್ನು ನೋಡುವ ಸುಖಕರ ಸಂಧಿಯು ಅವಳಿಗೆ ದೊರೆಯಿತು. ಆಗ್ಗೆ ತರತರದ ಕಾಮುಚೇಷ್ಟೆಗಳಿಂದ ಸೂಚಿಸಲ್ಪಟ್ಟ ಪರಸ್ಪರ ಪ್ರೇಮುಬಂಧನದಿಂದ ತಾರುಣ್ಯವು ಧನ್ಯವಾಯಿತು. ಒಬ್ಬರನ್ನೊಬ್ಬರು ಕದ್ದು ನೋಡುವಾಗ್ಗೆ ಗಡಬಿಡಿಯಿಂದೊಡಗೂಡಿದ ಮನಸಿನ ಉತ್ಸುಕತೆಯಿಂದ ನಾಚಿಕೆಯು ತಲೆದೋರಿತು. ಅದರಿಂದ ಅವಳು ಸ್ತಬ್ಧಳಾದರೂ ಅವಳ ಅವಯುವಗಳಿಗೆ ಅಂಟಿಕೊಂಡ ಬೆವರು ರೋಮಾಂಚನಗಳಿಂದಲೂ ಮತ್ತು ಅವಳಲ್ಲಿ ಹುಟ್ಟಿದ ನಡುಗಿನಿಂದಲೂ ನಮ್ಮಂಥ ಗೆಳತಿಯರಿಗೆಲ್ಲ ಆನಂದವಾಯಿತು. ಅಂದಿನಿಂದ ಅವಳ ಕಷ್ಟವು ಹೆಚ್ಚಾಗಿ ತಡಿಯಲಸಾಧ್ಯವಾದುದರಿಂದ ಅವಳ ಅವಸ್ಥೆಯು ಬಲು ಕಠಿಣವಾಗಿದೆ. ತುಸು ಹೊತ್ತಿನವರೆಗೆ ಮಾತ್ರ ಪೂರ್ಣಚಂದ್ರನನ್ನು ಕಂಡ ಎಳೆ ಕಮಲದಂತೆ, ಅವಳು ಕೊರಗುತ್ತಿರುವಳು. ಆದರೂ ಒಂದು ಕ್ಷಣ ಪ್ರಾಣವಲ್ಲಭನನ್ನು ತನ್ನ ಹೃದಯದಲ್ಲಿಟ್ಟುಕೊಂಡು, ಅವನ ಕೂಡ ಕಲ್ಪಿತ ಸಮಾಗಮುವನ್ನು ಅನುಭವಿಸುವಳು. ಆಗ ನೀರಿನಿಂದ ತುಂಬಿದ ಮೋಡಗಳು ಸುರಿದದ್ದರಿಂದ ತಣ್ಣಗಾದ ಭೂಮಿಯಂತಾಗುವಳು. ಯಾಕೆಂದರೆ, ಅವಳ ಮುಖವು, ಕುಣಿಯುವ ತುಟಿಗಳಿಂದಲೂ, ಹೊಳೆಯುವ ಮುತ್ತಿನಂಥ ಹಲ್ಲಗಳ ಪಂಕ್ತಿಯಿಂದಲೂ ಆ ಕಾಲಕ್ಕೆ ಹೆಚ್ಚು ಚಂದಕಾಣುವದು. ಅವಳ ಗಲ್ಲಗಳಲ್ಲಿ ರೋಮಾಂಚನಗಳು ದಟ್ಟಾಗಿ ಏಳುವವು ಮತ್ತು ಆನಂದ ಬಾಷ್ಪಗಳು ಅವುಗಳ ಮೇಲೆ ಒಂದೇ ಸವನೇ ಸುರಿದು ಗರಗರನೆ ತಿರುಗುವವು. ಅವಳ ಕಣ್ಣಗಳು ಮೆಲ್ಲಗೆ ಸರಿದಾಡುವ ಗೊಂಬೆಗಳಿಂದಲೂ ತುಸು ಹೆಚ್ಚು ಕಡಿಮೆ ಹಾರುವ ಹುಬ್ಬುಗಳಿಂದಲೂ, ಪಸರಿಸಿ ಸುಂದರವಾಗಿ ಅರಳಿದ ನೀಲಕಮಲಗಳಂತೆ ಶೋಭಿಸುವವು. ಹಣೆಯಲ್ಲಿ ದಟ್ಟಾಗಿ ಮೂಡಿದ ಬೆವರಿನ ಹನಿಗಳು ಚಂದ್ರನ

ಕೋರೆಯಂತೆ ಶೋಭಿಸುವವು. ಇವೆಲ್ಲ ಲಕ್ಷಣಗಳನ್ನು ನೋಡಿ ಇವಳು ಕುಮಾರಿಕೆಯೇ ಉಳಿದಿರುವಳೋ ಇಲ್ಲೊ ಎಂದು ಅವಳ ಕುಶಲ ಸಖಿಯರಿಗೆ ಸಹ ಸಂಶಯ ಬರುವದು. ಪ್ರಬಲವಾದ ಚಂದ್ರನ ಕಿರಣಗಳ ಸಮೂಹ ದಿಂದ ಚುಂಬಿಸಲ್ಪಟ್ಟು ನೀರು ಬಿಡುವ ಚಂದ್ರಮಣಿಯನ್ನು ಧರಿಸುವಳು. ದಟ್ಟಾಗಿ ಬೆರಿಸಿದ ಕರ್ಪೂರದಿಂದ ವಿಶೇಷ ತಂಪಾದ ಚಂದನರಸದ ಗೆರೆಗ ಳಿಂದ ಬಿಗಿದ ಎಳೆ ಬಾಳೀ ಎಲೆಗಳ ಮೇಲೆ ಮಲಗುವಳು. ಕಾಲು ಒತ್ತುವದೇ ಮೊದಲಾದ ಶೇವೆಯಲ್ಲಿ ಗಡಬಡಿಯಿಂದ ತೊಡಗಿರುವ ದಾಸಿಯರು ಕಮಲದ ಎಸಳುಗಳೊಳಗಿನ ನೀರಿನಿಂದ ತೊಯ್ದ ಬೀಸಣಿಕೆಗಳನ್ನು ಸಿದ್ಧಪಡಿಸಿ ಕೊಂಡು ನಿಂತಿರುವರು. ಆದರೂ ನಿದ್ರೆಯಿಲ್ಲದೆ ರಾತ್ರಿಗಳನ್ನು ಕಳಿಯುವಳು. ಹೇಗಾದರೂ ಮಾಡಿ ನಿದ್ರೆಹೋದರೆ, ಬೆವರಿನಿಂದ ಅವಳ ಪಾದಗಳಲ್ಲಿಯ ಮದರಂಗೀಬಣ್ಣವು ತೊಳೆದು ಹೋಗುವದು. ಅವಳ ವಿಶಾಲವಾದ ಮತ್ತು ತುಂಬಿದ ಮೊಲೆಗಳು ಬೊಡ್ಡೆಯಿಂದ ನಡುಗುವದರಿಂದ ಅವಳ ನೀರಿಗೆಗ ಕಟ್ಟು ಸಡಿಲಾಗುವದು. ಹಾರುವ ಎದೆಯ ಮಧ್ಯದಲ್ಲಿಯ ದೀರ್ಘಶ್ವಾಸ ದಿಂದ ಅಸಮವಾಗಿ ಹೊರಬೀಳುವ ರೋಮಾಂಚನಗಳಿಂದ ತುಂಬಿದ ಮೊಲೆ ಗಳ ಮೇಲೆ ಚಲ್ಲಿದ ನಡುಗುವ ಬಾಹುಗಳೆಂಬ ಬಳ್ಳಿಗಳನ್ನು ಬಿಗಿಯಾಗಿ ಅಪ್ಪುವಳು. ಒಮ್ಮಿಂದೊಮ್ಮೆ ಎಚ್ಚತ್ತುಕೂಡಲೇ ಬಿಟ್ಟ ಕಡೆಗಣ್ಣಿನ ನೋಟ ದಿಂದ ಕಂಡುಬರುವ ಶೂನ್ಯ ಶಯನವನ್ನು ನೋಡಿ ಮೂರ್ಛೆಹೊಂದುವಳು. ಅವಳು ಸಖೀಜನರು ಲಗುಬಗೆಯಿಂದ ಪ್ರಯತ್ನಮಾಡಿ ಮೂರ್ಛೆಯನ್ನು ಹೋಗಲಾಡಿಸುವರು. ಆಗ ಅವಳು ಬಿಡುವ ದೀರ್ಘಶ್ವಾಸದಿಂದಲೇ ಜೀವ ದಿಂದಿರುವಳೆಂದು ತಿಳುಕೊಳ್ಳುವರು. ಅವಳ ಸಖಿಯರಿಗೆ ಏನುಮಾಡಬೇ ಕೆಂಬುವದು ತಿಳಿಯದೆ, ಮೊದಲು ತಮ್ಮ ಜೀವಹೋಗಲೆಂದು ಬೇಡಿಕೊ ಳ್ಳುವರು. ದೈವದ ನಿರ್ದಯವಾದ ಲೀಲೆಯನ್ನು ಯಾರಿಂದಲೂ ತಪ್ಪಿಸ ಲಾಗದೆಂದು ಅದನ್ನು ಹಳಿಯುವರು. ದೇವಿಯವರೇ, ಈ ಲಾವಣ್ಯಭರಿತ ವಾದ ನಿಸರ್ಗದಿಂದ ಕೋಮಲವಾದ ಗಾತ್ರಗಳಿಗೆ ಮದನನು ಎಷ್ಟೋದಿವಸಗ ಳಿಂದ ಸುಖವಿಲ್ಲದಂತೆ ಮಾಡಿರುವನು. ತಾವೇ ನೋಡಿರಿ. ಪ್ರಾಣವಲ್ಲಭನ ಕೂಡ ಕ್ರೀಡಾಕಲಹ ಕ್ರೋಧ ಪ್ರೀತಿಗಳಿಂದ ಕೇರಳ ಸ್ತ್ರೀಯಳ ಕೆನ್ನೆಯು ವಿಸ್ತೃತವಾದಂತೆ, ಕೋಮಲ ಮತ್ತು ಅತಿ ಸ್ವಚ್ಛವಾದ ಬೆಳದಿಂಗಳು ಕತ್ತ ಲೆಯೆಂಬ ಮುಸುಕನ್ನು ಹರಿದು ಬಿಡುತ್ತಿರಲು ಹೇಗೆ ತಾಳಬೇಕು ! ಈ

ರಾತ್ರಿಗಳಲ್ಲಿ ಆಕಾಶವೆಂಬ ಅಂಗಣವು ಪಸರಿಸಿದ ಹಾಲಿನ ಪ್ರವಾಹದ ಭರತಿಯಂತೆ ಬೆಳ್ಳಗೆ ಹೊಳೆಯುವ ಬೆಳದಿಂಗಳದಿಂದ ತೊಳೆಯಲ್ಪಡುತ್ತದೆ. ಮಲಯಮಾರತನು ಪರಿಮಳವನ್ನು ಧರಿಸಿದ ಗುಲಾಬಿಯ ಮೊಗ್ಗೆಗಳನ್ನು ಒಳನುಗ್ಗಿ ಹೆಚ್ಚಿನ ಪರಿಮಳವನ್ನು ಹಿಂಡಿತೆಗೆದುಕೊಂಡು ವಿಪುಲವಾಗಿ ಮಗಮಗಿಸುತ್ತ ಮನೋಹರನಾಗಿರುವನು. ಇಂಥ ಮಲಯವಾತದಿಂದ ಹತ್ತುದಿಕ್ಕುಗಳು ತುಂಬಿಹೋಗುವವು. ಇಂಥ ರಾತ್ರಿಗಳು ನಮ್ಮ ಗೆಳತಿಗೆ ಅನರ್ಥವನ್ನುಂಟು ಮಾಡುತ್ತವೆ.

ಮಾಧವ—ದೇವಿಯವರ ಮನಸ್ಸು ಹೀಗೆ ಉದ್ವಿಗ್ನವಾಗಲಿಕ್ಕೆ ಯೋಗ್ಯ ಕಾರಣವಿರುತ್ತದೆ.

ಕಾಮಂದಕಿ—ಅಯ್ಯೋ ದುರ್ದೈವವೇ !

॥ ಶಾರ್ದೂಲ ವಿಕ್ರೀಡಿತಂ ॥

ಲೋಲಾಂಗಂಗುಳ ಬಾಲೆ ಮಾರ್ದವದ ಸಾರಂ ತಾನೆಯಾಗಿರ್ದು ಮಾ ।
ರಂ ಲುಪ್ತಾಸ್ತ್ರದಯಿಂ ನವೀನ ತಳಿರೊಳ್ ಚೂತಂಗಳೊಳ್ ಸುಯ್ಯುತಿ ।
ರ್ಪಲೀಲಾಯುತ ಮಾರುತಃ ಮಲಯಜಂ ತಾಪಂಗಳಂ ಪೆಚ್ಚಿಸಲ್ ।
ಮೇಲಿಟ್ಟಿರ್ದ ಮನೋಹರಂ ಶಿಖರನೆಂದೊಪ್ಪಿರ್ಪನೀಚಂದ್ರನುಂ ॥೧೪॥

ಲವಂಗಿಕೆ—ಮತ್ತು ದೇವಿಯವರೇ, ಇದು ಮಾಧವನ ಚಿತ್ರದಿಂದ ಶೋಭಿಸುವ ಚಿತ್ರದ ಹಲಿಗೆಯು.(ಮಾಲತಿಯ ಎದೆಯ ಮೇಲಿನ ಸೆರಗು ತೆಗೆದು) ಇದು ಅವನು ತನ್ನ ಕಯ್ಯಿಂದಲೇ ಹೆಣೆದ ಬಕುಲ ಮಾಲೆಯು. ಇದನ್ನು ನನ್ನ ಪ್ರೀತಿಯ ಗೆಳತಿಯು ಕೊರಳೊಳಗೆ ಧರಿಸಿರುವಳು. ಅದು ಅವಳಿಗೆ ಸಂಜೀವನವಾಗಿರುವದು. (ಬಕುಲಮಾಲಿಯನ್ನು ತೋರಿಸುವಳು.)

ಮಾಧವ—

॥ ಚಂಪಕ ॥

ಬಕುಲದ ಮಾಲೆ ನೀ ಜಗದೊಳೆಲ್ಲರಕಿಂತಲು ಹೆಚ್ಚುಧನ್ಯಳೇ ।
ಕಕುಲತೆಯಿಂದ ನೋಡುವಳು ನಿನ್ನೊಳು ಪ್ರೀತಿಗೆ ಪಾತ್ರಳೆಂದು ತಾ ।
ಸಖಿಯುಳ ಪೀನಪಾಂಡು ಕುಚಗಳ್ ರಸವಿಲ್ಲದ ದೇಂಟನಂತಿರಲ್ ।
ಸುಖದೊಳಗಲ್ಲಿ ನೀಮೆರೆಯು ತಿರ್ಪಯೆ ಕೇತನದಂತೆ ಲೀಲೆಯೊಳ್ ॥೧೫॥

(ಪಡದೆಯಲ್ಲಿ ಗಲಬಿಲಿಯು. ಎಲ್ಲರೂ ಕೇಳುತ್ತಾರೆ).

ಎಲೆ, ಎಲೈ, ಶಂಕರಪುರದ ಜನರೇ, ಸಿಂಹವು ಪ್ರಾಯಕ್ಕೆ ಬಂದು ಮಿತಿಮೀರಿದ ಸೊಕ್ಕಿನಿಂದಲೂ ಸಿಟ್ಟಿನಿಂದಲೂ ತುಂಬಿ ತುಳುಕುತ್ತದೆ. ಅದು ಕಸುವಿನಿಂದ ತನ್ನ ಕಬ್ಬಿಣದ ಪಂಜರವನ್ನು ಮುರಿದು. ದಾಟುವದರಲ್ಲಿ ತನಗೆ ತೊಡಕು ಹಾಕಿದ ಸರಪಳಿಯನ್ನು ಅಲ್ಲೇ ಹರಿದು ಬಿಟ್ಟಿತು. ಅದು ತನ್ನ ಚಲ್ಲಾಟದ ಭರದಲ್ಲಿ, ತನ್ನ ಪ್ರೀತಿಯ ಬಾಲವನ್ನು ಮೇಲಕ್ಕೆತ್ತಿರುವದು. ಆ ಬಾಲವು ಅದರ ಭಯಂಕರ ಸೊಕ್ಕಿನ ಶರೀರದ ಭಯಪ್ರದವಾದ ನಿಶಾನೆಯಂತೆ ತೋರುತ್ತದೆ. ಅದು ಹಸಿದದ್ದರಿಂದ ಮಠದಿಂದ ಹೊರಬಿದ್ದ ಕೊಡಲೇ ಎಷ್ಟೋ ಜನರನ್ನು ತಿಂದು ಬಿಟ್ಟಿತು. ಆ ಜನರ ಅವಯವಗಳಲ್ಲಿಯ ಬಿರುಸಾದ ಎಲುವುಗಳನ್ನು ಕಡಿಯುವಾಗ ಕಟಕಟ ಶಬ್ದಮಾಡುತ್ತದೆ. ಅದರ ಬಾಯಿಯು ಗವಿಯಂತೆಯೂ ಅದರ ದವಡೆಯ ಹಲ್ಲುಗಳು ಕರಗಸದಂತೆ ಕಠಿಣವಾಗಿಯೂ ಇರುವವು. ಅದು ತನ್ನ ಭಯಂಕರವಾದ ಲೀಲೆಯಲ್ಲಿ ಭಯಪ್ರದವಾದ ಪಂಜರಗಳ ಹೊಡತದಿಂದ ಇಲ್ಲಿ ಕೂಡಿದ ಮನಷ್ಯರನ್ನೂ, ಕುದುರೆಗಳನ್ನೂ ಕೊಂದಿತು. ಅವರ ಮಾಂಸದ ರಾಶಿಯಿಂದ ಅದರ ಕುತ್ತಿಗೆಯೆಂಬ ಗವಿಯು ಒಳಭಾಗವು ತುಂಬಿ ಘುರ್ಘುರಿಸುತ್ತದೆ. ಅದರ ಗುಡುಗಿನಿಂದಲೂ ಗರ್ಜನೆಯಿಂದಲೂ ಆಕಾಶವೆಲ್ಲ ತುಂಬಿ ಹೋಗಿದೆ. ಮಂದಿಯು ಗುಂಪಿನಲ್ಲಿ ಕೆಲವರು ಸತ್ತರು, ಕೆಲವರು ಪುಡಿಪುಡಿಯಾದರು, ಕೆಲವರು ತಪ್ಪಿಸಿಕೊಂಡರು, ಕೆಲವರು ಸುರಕ್ಷಿತ ಸ್ಥಳಗಳಿಗೆ ಓಡಿಹೋದರು. ಅದು ತನ್ನ ಹದನಾದ ಉಗುರುಗಳೆಂಬ ಶಸ್ತ್ರಗಳಿಂದ ಜಗ್ಗಿ ಹರಿದ ಪ್ರಾಣಿಗಳ ಅವಯವಗಳಿಂದ ಹೊರಬೀಳುವ ರಕ್ತದಿಂದ [illegible]ಗಳೆಲ್ಲ ಕೆಸರಾಗಿವೆ. ಈ ಕೆಟ್ಟ ಶಾರ್ದೂಲವು ಯಮನ ಲೀಲೆಯನ್ನು ನಡಿಸಿರುವದು. ಆದ್ದರಿಂದ ನಿಮ್ಮಿಂದಾದಷ್ಟು ನಿಮ್ಮ ನಿಮ್ಮ ಜೀವಗಳನ್ನು ಕಾಯ್ದುಕೊಳ್ಳಿರಿ.

( ಭೀತಿಯಿಂದ ಪ್ರವೇಶ ಮಾಡಿ )

ಬುದ್ಧರಕ್ಷಿತೆ—ಉಳಿಸಿರಿ, ನಮ್ಮನ್ನು ಉಳಿಸಿರಿ. ಈ ಕೆಟ್ಟ ಶಾರ್ದೂಲವು, ನಮ್ಮ ನಂದನ ಮಂತ್ರಿಗಳ ತಂಗಿಯಾದ ಮದಯಂತಿಕೆಯ ದಾಸಿಯರನ್ನೆಲ್ಲ ಕೊಂದು ಹರಿದು ಅವಳ ಮೈಮೇಲೆ ಹೋಗುತ್ತದೆ.

ಮಾಲತಿ—ಗೆಳತೀ ಲವಂಗಿಕೆ, ಏನು ನಮ್ಮ ದುರ್ದೈವವಿದು?

ಮಾಧವ— ಬುದ್ಧರಕ್ಷಿತೇ, ಆ ಶಾರ್ದೂಲವು ಎಲ್ಲಿರುವದು?

ಮಾಲತಿ— ( ಆನಂದದಿಂದಲೂ ನಾಚಿಕೆಯಿಂದಲೂ ತನ್ನಷ್ಟಕ್ಕೆ ) ಅವ್ವಯ್ಯಾ ಇವರಾದರೂ ಇಲ್ಲೇ ಇರುವರಲ್ಲ.

ಮಾಧವ— ( ತನ್ನಷ್ಟಕ್ಕೆ ) ಆಹಾ, ಇವಳಿಗೆ ನಾನು ಅಕಸ್ಮಾತ್ ಕಂಡದ್ದರಿಂದ ಇವಳಿಗಾದ ಆನಂದದಿಂದ ನಾನು ಧನ್ಯನಾದೆನು.

॥ ಮಲ್ಲಿಕಾಮಾಲೆ. ॥

ಪುಂಡರೀಕದ ದೇಂಟನಿಂ ಬಿಗಿದೆನ್ನಕಟ್ಟಲು ಸ್ನೇಹದಿಂ ।
ಚಂಡದುಗ್ಧದ ವೃಷ್ಟಿಯೊಳ್ ಮಮಕಾಯಮಿಂದಿತು ಮೋದದಿಂ ॥
ದುಂಡಳೆನ್ನನು ತನ್ನ ಲೋಚನದಿಂದೆ ಮಾನಿನಿ ಪ್ರೇಮದಿಂ ।
ಕಂಡಕೂಡಲೆ ಮೇಲಿನಿಂ ಘನವೃಷ್ಟಿಯಿಂ ಸುಧೆ ನೀಡಿವಳ್ ॥೧೬॥

ಬುದ್ಧರಕ್ಷಿತೆ—ಎಲೋ ಶೂರ ಪುರುಷನೇ, ಅದು ಇಲ್ಲೇ ತೋಟದ ಹೊರಗಿನ ಹಾದಿಯಲ್ಲಿರುವದು.

ಮಾಧವ— ( ಅವಸರದಿಂದ ) ನಿಶ್ಚಯವಾಗಿ ಕೊಲ್ಲುವೆನು.

ಮಾಲತಿ—ಲವಂಗಿಕೇ, ಇದೊಂದು ಚಿಂತೆಯೇ ಆಯಿತು.

ಮಾಧವ— ( ಆವೇಶದಿಂದ ) ಅಹಹ.

॥ ಉತ್ಪಲಮಾಲಾ. ।

ಸಿಂಗನ ಮಾರ್ಗವೆಲ್ಲ ಪರಿದಿರ್ಪ ಕರುಳ್ಗಳ ತುಂಡಿನಲ್ಲಿ ತೋ ।
ರ್ಪಂಗ ವಿಭಾಗದಿಂದೆಸೆಯುತಿರ್ಪುದು ರಕ್ತದಿ ಕರ್ದಮಾಂಕಿತಂ ॥
ಕಂಗಳು ಹೇಸುತಿರ್ಪವಿದರೊಳ್ ಪದವಿಟ್ಟೊಡೆ ಕಾಲು ಕೀಳವೂ ।
ಪಿಂಗಳ ಬಂಣದಿಂದೆ ಬಲುಭೀಕರವಾಗಿಹುದಿಲ್ಲಿ ನೋಟವೂ ॥೧೭॥

ಅಯ್ಯೋ ಕಷ್ಟ!

॥ ಉತ್ಪಲಮಾಲಾ. ॥

ಕಾಮಿನಿ ಪೋದಳಾ ಪಶುವಿನಾಕ್ರಮದೊಳ್ ಬಲುದೂರ ನಾವಿರಲ್ ।

ಎಲ್ಲರು—ಅಯ್ಯೋ! ಮದಯಂತಿಕೇ.

ಕಾಮಂದಕೀ ಮಾಧವರು — ( ಆನಂದದಿಂದ ಮತ್ತು ಉದ್ವೇಗದಿಂದ )

ನೇಮಿಸಿದಂತೆ ಮಧ್ಯದೊಳು ನಿಂತನು ತಾ ಮಕರಂದ ಕೈದುವಂ ।
ಸುಮ್ಮನೆ ಬಿದ್ದ ಪ್ರೇತಕರದಿಂದೆಳೆಯುತ್ತಿದುರಲ್ಲಿ ಶೀಘ್ರದಿಂ ।
ಉಳಿದವರು— ಶಹಾಬಾಸು, ಮಹಾಪುರುಷನೇ ಶಹಾಬಾಸು.

ಕಾಮಂದಕೀ— ಮಾಧವರು:—

ಗಂಮ್ಮನೆ ಸಿಂಗ ಪೊಯ್ಯಿತವನಂ ಮರುಳಾತನು ಕೊಂದ ಸಿಂಗನಂ ॥೧೮॥

ಉಳಿದವರು— ಏನು ಅನರ್ಥವಿದು?

ಕಾಮಂದಕೀ ( ಉದ್ದೇಶದಿಂದ )— ಬಾಲಕನಾದ ಮಕರಂದನ ಮಯ್ಯಲ್ಲಿ ಸಿಂಹನ ಹೊಡತಬಿದ್ದಲ್ಲಿಂದ ರಕ್ತವು ಹೊರಬೀಳಹತ್ತಿದೆ. ಭೂಮಿಯಲ್ಲಿ ನಟ್ಟ ಕತ್ತಿಗೆ ಆತು ಸುಮ್ಮನೇ ನಿಂತಿರುವನು. ಗಾಬರಿಯಾದ ಮದಯಂತಿಕೆಯು ಅವನ ಕಯ್ಯ ಹಿಡಿದಿರುವಳು.

ಉಳಿದವರು— ಅಯ್ಯೋ ಆ ಶೂರ ಪುರುಷನು ಭಯಂಕರವಾದ ಹೊಡತಗಳಿಂದ ಮೂರ್ಛಿತನಾಗುತ್ತಿರುವನು.

ಮಾಧವ— ಅಯ್ಯೋ ಮೂರ್ಛೆ ಹೊಂದಿದನು. ದೇವೀ ನೀವೇ ಕಾಯಬೇಕು.

ಕಾಮಂದಕಿ— ಮಗೂವೇ ನೀನು ಸುಳ್ಳೇ ಅಂಜುವಿ. ಬಾ ನೋಡುವ.

( ಎಲ್ಲರೂ ಹೋಗುತ್ತಾರೆ )

**ಮೂರನೆಯ ಅಂಕ ಸಮಾಪ್ತವಾಯಿತು.**

# ನಾಲ್ಕನೆಯ ಅಂಕ.



( ಮೂರ್ಛೆಹೋದಿದ ಮಕರಂದ ಮಾಧವರನ್ನು ಮದಯಂತಿಕಾ ಮಾಲತಿಯರು ಹಿಡುಕೊಂಡು ಕೂತಿರುವರು. ಕಾಮಂದಕಿ ಬುದ್ಧರಕ್ಷಿತೆ ಲವಂಗಿಕೆಯರು ಗಾಬರಿಯಾಗಿ ಬರುವರು. )

ಮದಯಂತಿಕೆ— ದೇವೀ, ಪ್ರಸನ್ನಳಾಗು. ಮದಯಂತಿಕೆಯ ದೆಸೆಯಿಂದ ತನ್ನ ಜೀವವನ್ನು ಗಂಡಾಂತರಕ್ಕೆಡೆಮಾಡಿದ ಈ ಪರೋಪಕಾರಿಯಾದ ಶೂರ ಪುರುಷನನ್ನು ಕಾಪಾಡು.

ಉಳಿದವರು— ಅಯ್ಯೋ, ಅಯ್ಯಯ್ಯೋ, ಇಲ್ಲೇನು ನೋಡುವದದೆ.

ಕಾಮಂದಕಿ— ( ಇಬ್ಬರೂ ಕಮಂಡಲದಲ್ಲಿಯ ನೀರು ಸಿಂಪಡಿಸಿ ) ನೀವು ಶರಗಿನಿಂದ ಗಾಳಿಹಾಕಿರಿ

( ಮಾಲತಿ ಮೊದಲಾದವರು ಅದರಂತೆ ಮಾಡುವರು. )

ಮಕರಂದ— ( ಎಚ್ಚತ್ತು ನೋಡಿ ) ಗೆಳಿಯಾ, ನೀನು ಬಹಳ ಗಾಬರಿಯಾದಂತೆ ತೋರುತ್ತದೆ. ಇದೇನು ? ನಾನು ಕ್ಷೇಮದಿಂದಲೇ ಇರುವೆನು.

ಮದಯಂತಿಕೆ— ಆಹಹ, ಈಗ ಮಕರಂದ ಪೂರ್ಣಚಂದ್ರನು ಎಚ್ಚತ್ತರಾದನು.

ಮಾಲತಿ— ( ಮಾಧವನ ಹಣೆಯ ಮೇಲೆ ಕಯ್ಯಿಟ್ಟು ) ನಿಮ್ಮ ಶೂರ ಮಿತ್ರನು ಸ್ಮೃತಿ ಹೊಂದಿರುವನು ಕೇಳಿದಿರಾ.

ಮಾಧವ— ( ಎಚ್ಚತ್ತು ) ಶೂರನಾದ ಗೆಳಿಯನೇ ಬಾ. ( ಆಲಿಂಗಿಸುವನು )

ಕಾಮಂದಕಿ— ( ಇಬ್ಬರನ್ನೂ ಮುಂದಲಿಜು ಮೇಲೆ ಮೂಸಿನೋಡಿ ) ನನ್ನ ಸುದೈವದಿಂದ ನನ್ನ ಎರಡೂ ಕೂಸುಗಳು ಬದುಕಿದವು.

ಎಲ್ಲರು— ( ಆನಂದದಿಂದ ) ಬಲು ಒಳಿತಾಯಿತು.

ಬುದ್ಧರಕ್ಷಿತೆ—( ಬದಿಗೆ )ಗೆಳತೀ. ಮದಯಂತಿಕೇ. ಇವನೇ ಅವನು.

ಮದಯಂತಿಕೆ— ಗೆಳತೀ, ಇವನು ಮಾಧವನು. ಇವರು ಅವರೆಂಬುವದು ನನಗೂ ತಿಳಿದದೆ.

ಬುದ್ಧರಕ್ಷಿತೆ— ನಾನು ಹೇಳಿದ್ದು ನಿಜವಲ್ಲವೇ ?

ಮದಯಂತಿಕೆ—ನನ್ನಂಥವಳಿಗೆ ನಿನ್ನಂಥವಳು ಸುಳ್ಳು ಹೇಳುವದುಂಟೇ? (ಮಾಧವನನ್ನು ನೋಡಿ ) ಮಾಲತಿಯಂತೂ ಈ ಸುಂದರ ಪುರುಷನಲ್ಲಿ ಪ್ರೇಮವಿದ್ದಂತೆ ಸುದ್ದಿಯದೆ. ( ಹೀಗೆಂದು ಮಕರಂದನನ್ನೇ ಉತ್ಸುಕತೆಯಿಂದ ನೋಡುತ್ತಾಳೆ )

ಕಾಮಂದಕಿ— ( ತನ್ನಷ್ಟಕ್ಕೆ ) ದೈವಯೋಗದಿಂದ ಈ ಹೊತ್ತು ಮದಯಂತಿಕೆ ಮಕರಂದರ ಪರಸ್ಪರ ದರ್ಶನವು ಬಲು ಅನುಕೂಲವಾಗಿ ಕೂಡಿಬಂತು. ( ಎಲ್ಲರೂ ಕೇಳುವಂತೆ ) ಮಗುವೇ, ಮಕರಂದಾ, ಅದೇ ವೇಳೆಯಲ್ಲಿ ಹೇಗೆ ಮದಯಂತಿಕೆಯ ಸುದೈವವು ಅವಳನ್ನುಳಿಸುವ ದೆಸೆಯಿಂದ ನಿನ್ನನ್ನಲ್ಲಿ ಕರೆತಂದಿತು?

ಮಕರಂದ— ನಾನು ಈ ಹೊತ್ತು ಊರಲ್ಲಿ ಏನೋ ಒಂದು ಸುದ್ದಿ ಕೇಳಿದ್ದರಿಂದ ಮಾಧವನ ಮನಸಿನ ತಾಪವು ಹೆಚ್ಚಾಗಿರಬಹುದೆಂದು ಸಂಶಯ ಬಂತು. ಅವಲೋಕಿತೆಯು ಹೇಳಿದ ಮದನೋದ್ಯಾನದಲ್ಲಿ ಸಂಭವಿಸಿದ ಸುದ್ದಿಯನ್ನು ಕೇಳಿ ಅವಸರದಿಂದ ಬರುವಷ್ಟರಲ್ಲಿ, ಹುಲಿಯ ಕೈಪಾಡಿನಲ್ಲಿ ಸಿಕ್ಕ ಈ ಸುಶೀಲ ಕನ್ನಿಕೆಯನ್ನು ಕಂಡೆನು.

( ಮಾಲತಿ ಮಾಧವರು ಹೆದರುವರು )

ಕಾಮಂದಕಿ — ( ತನ್ನಷ್ಟಕ್ಕೆ ) ಆ ಸುದ್ದಿ ಬಹಳ ಮಾಡಿ ಮಾಲತಿಯನ್ನು ಕೊಟ್ಟಬಗ್ಗೆ ಇರಬಹುದು. ( ಕೇಳುವಂತೆ ) ವತ್ಸಾ, ಮಾಧವಾ, ಮಾಲತಿಯು ನಿನಗೆ ಒಳ್ಳೇ ಸುದ್ದಿಯನ್ನು ಹೇಳಿರುವಳು. ಅವಳಿಗೆ ನಿನ್ನ ಪ್ರೀತಿಯನ್ನರ್ಪಿಸುವದು ಇದೇ ಸಮಯವು.

ಮಾಧವ— ದೇವಿಯವರೇ, ಕೇಳಿರಿ.

॥ ಚ. ಪ. ॥

ಗೆಳೆಯನು ಸಿಂಹಘಾತದಿ ಪ್ರಮುಗ್ಧನಿರಲ್ ಬಲು ಬೌಳಿ ಬಂದಿತ್ತೆ ।
ನ್ನೊಳು ದಯವಿಟ್ಟು ನೀಕಳೆಯು ತನ್ನಯ ಬಾಧೆಯ ನರ್ಹಳಾದಿ ನಿ
ರ್ಮಳ ಮನ ಮಾನಸಕ್ಕೆ ಮುದದೊಳ್ಪೊರೆದೀತನ ಪಿಂಗೆ ಮತ್ತೆ ನಾ
ಮಿಳಿತ ಕೃತಜ್ಞಬುದ್ಧಿಯೊಳಗಾದರದಿಂ ನಿನಗೀವೆ ನೀರ್ವನೂ ॥೧

ಲವಂಗಿಕೆ— ನಮ್ಮ ಗೆಳತಿಯು ಇದೇ ಪ್ರಸಾದವನ್ನು ಬೇಡುತ್ತಿದ್ದಳು.

ಮದಯಂತಿಕೆ— ( ತನ್ನಷ್ಟಕ್ಕೆ ) ಈ ಮಹಾಪುರುಷನು ಮನಸ್ಸಿಗೆ ಬರುವದನ್ನೇ ಮಾತಾಡಬಲ್ಲನು.

ಮಾಲತಿ— ( ತನ್ನಷ್ಟಕ್ಕೆ )ಆ ಉದ್ವೇಗ ಜನಕ ಸುದ್ದಿಯು ಏನಿರಬಹುದು!

( ಪ್ರವೇಶಮಾಡಿ )

ಪುರುಷನು.—ತಂಗೀ ಮದಯಂತಿಕೇ,ನಿನ್ನ ಹಿರಿಯ ಅಣ್ಣನಾದ ನಂದನ ಮಂತ್ರಿಯು ಹೇಳಿಕಳುಹಿಸಿರುವದೇನಂದರೆ, ಈ ಹೊತ್ತು ಸಾರ್ವಭೌಮರಾದ ಮಹಾರಾಜರು ನಮ್ಮ ಮನೆಗೆ ಬಂಧು ಭೂರಿವಸುವಿನಲ್ಲಿ ಪೂರ್ಣ ವಿಶ್ವಾಸವನ್ನೂ ನಮ್ಮ ಮೇಲೆ ಪೂರ್ಣ ಅನುಗ್ರಹವನ್ನೂ ತೋರಿಸಿದರು. ತಾವೇ ಮಾಲತಿಯನ್ನು ಕೊಟ್ಟು ಬಿಟ್ಟರು. ಈ ಪ್ರಸಾದದಿಂದುಂಟಾದ ಅನಂದದಲ್ಲಿ ಪಾಲುಗಾರ್ತಿಯಾಗಲಿಕ್ಕೆ ನೀನು ಬರಬೇಕು.

ಮಕರಂದ—ಇದೇ ಆ ಸುದ್ದಿಯು.

(ಮಾಲತೀ ಮಾಧವರ ಮೋರೆಗಳು ಬಾಡುತ್ತವೆ.)

ಮದಯಂತಿಕೆ—( ಆನಂದದಿಂದ ಮಾಲತಿಯ ಮೈಮೇಲೆ ಕೈಯ್ಯಾಡಿಸಿ ) ಗೆಳತೀ, ಮಾಲತೀ, ನಾನೂ ನೀನೂ ಒಂದೇ ಊರವರಿದ್ದು ಧೂಳಿನಲ್ಲಿ ಆಡುವಾಗಿನಿಂದ ಅಕ್ಕ ತಂಗಿಯರಿಂತಿದ್ದೇವೆ. ಈಗಂತೂ ನೀನು ನಮ್ಮ ಮನಿಯ ಲಕ್ಷ್ಮಿಯಾದಿ.

ಕಾಮಂದಕಿ—ಮಗಳೇ ಮದಯಂತಿಕೆ, ಅಣ್ಣನಿಗೆ ಮಾಲತಿ ದೊರೆತದ್ದರಿಂದ ಆನಂದವಾಯಿತಿಲ್ಲೋ?

ಮದಯಂತಿಕೆ—ಇದು ತಮ್ಮ ಆಶೀರ್ವಾದ ಪ್ರಸಾದದಿಂದಲೇ ಆಯಿತು. ಗೆಳತೀ ಲವಂಗಿಕೆ, ನೀವು ದೊರೆತದ್ದರಿಂದ ನಮ್ಮ ಮನೋರಥಗಳು ಪೂರ್ಣವಾದವು.

ಲವಂಗಿಕೆ—ನಾವಾದರೂ ಇದನ್ನೇ ಹೇಳತಕ್ಕವರಿದ್ದೆವು.

ಮದಯಂತಿಕೆ—ಗೆಳತೀ ಬುದ್ಧರಕ್ಷಿತೇ ಬಾ, ಈ ಮಹೋತ್ಸವವನ್ನು ನೆರವೇರಿಸುವ. ( ಹೀಗೆಂದು ಏಳುತ್ತಾರೆ )

ಲವಂಗಿಕೆ—(ಬದಿಗೆ) ಪೂಜ್ಯರೇ, ಮದಯಂತಿಕಾ ಮಕರಂದರ ಪರಸ್ಪ
ಕಟಾಕ್ಷಗಳು ಇದೇ ಹರಿದು ತಂದ ನೀಲೀ ಕಮಲದಂತೆ ಹೊಳೆಯುತ್ತ
ಮನಸಿನಲ್ಲಿ ತುಂಬಿ ಹೊರಬೀಳುವ ಆಶ್ಚರ್ಯ ಆನಂದಗಳಿಂದ ಅವರ ನೇತ್ರ
ಗಳು ಪರಿಪೂರ್ಣವಾಗಿವೆ. ಅವರು ಮಾನಸನಿರ್ಮಿತ ಸಮಾಗಮದಲ್ಲಿ
ರುವರೆಂದು ತೋರುತ್ತದೆ.

ಕಾಮಂದಕಿ—( ನಕ್ಕು ) ಇವರು ನಿಜವಾಗಿ ಮಾನಸಿಕ ಸಮಾಗಮವನ್ನ
ನುಭವಿಸುತ್ತಿರುವರು. ಯಾಕಂದರೆ,

॥ ಮತ್ತೇಭವಿಕ್ರೀಡಿತ ॥

ಕಿರಿಕೊಂಕುತ್ತುರೆ ಮಂದಮಾದ ಕಡೆಗಣ್ಣಿಂ ಮುಚ್ಚುವಳ್ ಪ್ರೇಮದಿಂ ।
ನೆರೆಕಾಂತಂ ಅತಿ ಪ್ರೇಮದಿಂದವಳ ನೋಟಂ ವಕ್ರ ಭ್ರೂಯುಗ್ಮದಿಂ ।
ಪರಿಸುತ್ತಿರ್ಪಳು ಪೋದವಂ ಮನದೊಳೀಗಳ್ ಕಂಗಳಂ ಮುಚ್ಚಿದೇ ।
ಗುಣಶಾಂತಂ ಯುವತಿಯಿರ್ದ ಬಾಲೆಯರಿ ಮುಚ್ಚಿರ್ದೀಕ್ಷಣಗಳ್
ತೋರ್ಪವು ॥ ೨೫ ॥

ಪುರುಷ—ತಂಗೀ ಮದಯಂತಿಕೇ, ಇತ್ತಕಡೆಗೆ ಬಾ.

ಮದಯಂತಿಕೆ—( ಬದಿಗೆ )—ಈ ನನ್ನ ಜೀವದಾನ ಕೊಟ್ಟ ಕಮಲಲೋಚ
ನನ್ನು ಇನ್ನೊಮ್ಮೆ ನನ್ನ ಕಣ್ಣಿಗೆ ಬೀಳಬಹುದೇ?

ಬುದ್ಧರಕ್ಷಿತೆ—ದೈವವು ಅನುಕೂಲವಿದ್ದರೆ ಬೀಳಬಹುದು.

ಮಾಧವ—( ಬದಿಗೆ )

॥ ಚಂಪಕ ಮಾಲಾ ॥

ಕಮಲದ ದೇಟನಂತೆ ಭಿದುರಂ ಸಖಿಯಾಕೆಯು ತಂತುನಷ್ಟನಾ ।
ಗೆ ಮನದ ತಾಪರೋಗಗಳು ಪೆಚ್ಚಲಿನನ್ನೊಳ—ಬಾಧಿತಂಗಳೂ ।
ಶಮನವ ಕಾಣದೆನ್ನ ಮನ ಚಾಂಚಲ ದಾಣತಿಗೆನ್ನನೀಯಲೀ ।
ಸುಮನಶರಂ ವಿನೋದಿಸಲಿ ಬೊಮ್ಮನು ಶಾಂತಿಯು ಪೊಂದಲೀಗ ತಾ ॥೩॥

ಅಥವಾ

ಉತ್ಪಲ ಮಾಲಾ ।

ದುರ್ಲಭಕಾಂತೆಯೊಳ್ ಮನವನಿಟ್ಟೊಡೆ ಯಾಕೆಯು ಪ್ರೇಮವಿರ್ದೊಡೇಂ ।
ಕಾಲವಿರೊಧ ವಿರ್ದೊಡವು ನಿಷ್ಫಲವಾಗುವವೆಲ್ಲ ಕಾರ್ಯಗಳ್ ।

ಬಾಲೆಯು ಕೇಳಿ ದಾನದ ಕುವಾರ್ತೆಯ ಚಿತ್ತದಿ ನೊಂದು ಬೆಂದಳಾ ।
ಕಾಲದಿ ತಾಪಗಳ್ ಪೆರೆಯು ವೋಲೆಸೆದಳ್ ಲಲಿತಾಂಗಿ ನೋಟಕೆ ॥೪॥

ಕಾಮಂದಕಿ— ( ತನ್ನಷ್ಟಕ್ಕೆ ) ಹೀಗೆ ಖಿನ್ನರಾದ ಮಾಲತಿಯನ್ನೂ ಮಾಧವನನ್ನೂ ನೋಡಿ ಮನಸ್ಸಿಗೆ ವ್ಯಸನವಾಗುತ್ತದೆ. ನಿರಾಶೆಯಾದ ಮೇಲೆ ಬಲುಕಷ್ಟ ( ಕೇಳುವಂತೆ ) ವತ್ಸಾ ಮಾಧವಾ ನಾನೊಂದು ಮಾತು ನಿನಗೆ ಕೇಳುತ್ತೇನೆ. ಭೂರಿವಸುವು ತಾನಾಗಿಯೇ ಮಾಲತಿಯನ್ನು ನಮಗೆ ಕೊಡುವನೆಂದು ನೀನು ನಂಬಿದ್ದೀಯೋ?



ಮಾಧವ—(ನಾಚಿ) ಇಲ್ಲ ಹಾಗೇನೂ ಇಲ್ಲ.

ಕಾಮಂದಕಿ— ಹಾಗಾದರೆ ಭೂರಿವಸುವು ನಿನಗೇನೂ ವೊದಲಿನಕಿಂತ ಕೆಡುಕುಮಾಡಿಲ್ಲ.

ಮಕರಂದ— ಈಗ ಮಾಲತಿಯನ್ನು ಈ ವೊದಲೇ ಕೊಟ್ಟಿರುವರೆಂದು ಮನಸಿಗೆ ಸಂಶಯು ಬರುತ್ತದೆ.

ಕಾಮಂದಕಿ—ಆ ಸುದ್ಧಿಯನ್ನು ನಾನು ಬಲ್ಲೆನು. ನಂದನನ ಬೇಸೆಯಿಂದ ಮಾಲತಿಯನ್ನು ಬೇಡುವ ಅರಸನಿಗೆ ತಮ್ಮ ಮಗಳಿಗೆ ಮಹಾರಾಜರು ತಾವೇ ಒಡೆಯರೆಂದು ಭೂರಿವಸುವು ಹೇಳಿದ್ದು ಪ್ರಸಿದ್ಧವೇ ಆದೆ.

ಮಕರಂದ—ಹೌದು ಇದು ನಿಜ.

ಕಾಮಂದಕಿ—ಈ ಹೊತ್ತು ಮಹಾರಾಜರು ತಾವೇ ಮಾಲತಿಯನ್ನು ಕೊಟ್ಟರೆಂಬ ಸುದ್ದಿಯನ್ನು ಪುರುಷನು ಈಗಲೇ ಹೇಳಿರುವನು. ಮನುಷ್ಯರ ಶರೀರ ಸಂಬಂಧಗಳು ಅವರಾಡುವ ಮಾತುಗಳ ಮೇಲೆ ಅವಲಂಬಿಸಿರುತ್ತವೆ. ಆಭೂರಿವಸು ಮಂತ್ರಿಗಳ ಮಾತು ಸುಳ್ಳಿದ್ದಂತೇ ಸರಿ. ಮಾಲತಿಯಾದರೂ ಮಹಾರಾಜರ ಸ್ವಂತಹದ ಮಗಳಲ್ಲ. ಹೆಣ್ಣುಮಕ್ಕಳನ್ನು ಕೊಡುವದರಲ್ಲಿ ಅರಸರು ಹೇಳಿದ್ದು ಪ್ರಮಾಣವೆಂದು ಧರ್ಮಾಚಾರ ಶಾಸ್ತ್ರದಲ್ಲಿ ಹೇಳಿಲ್ಲ. ಆದರಿಂದಲೇ ಅವರು ಹೀಗೆ ಹೇಳಿರುವರು. ನಾನೇನು ಕಣ್ಣುಮುಚ್ಚಿರುವೆನೆಂದು ತಿಳಿದಿರುವಿಯೋ? ನೋಡು—

॥ ವಸಂತ ॥

ನೀನೀಗ ಬಾಲಿಕೆಗೆ ಸನ್ನೊಳು ಶಂಕಿರ್ದೆ ।
ಹೀನಾಪದಂ ಪಗೆಗಳೋಳ್ ಸಹ ಶಕ್ಯವಿಲ್ಲಂ ।

ನಾನಂತು ನಿಮ್ಮ ಮನದಾಶೆಯು ಸಾಧಿಸಲ್ಕೀ ।
ಗೇನಾದೊಡೇಂ ಬಿಡೆನು ಪ್ರಾಣವು ಪೋದರೂ ಕೇಳ್ ॥ ೫ ॥

ಮಕರಂದ--ತಾವು ಹೇಳುವದೆಲ್ಲ ಸರಿಯೇ ಮತ್ತೆ.

ದಯಯುತ ಪ್ರೇಮದಿಂದೆ ತವ ಮಾನಸಪೂರ್ವರೊಳಾರ್ದ್ರ ಭಾವದಿಂ
ನಿಯತ ವಿಕಾರ ಮಿದೊರ್ಡತಿ ಕಾತರ ವಾಗಿಹುದೀಗ ದೇವಿಯೇ ।
ಭಯನಮಗಿಲ್ಲ ಯತ್ನಗಳು ನಿನ್ನವು ನಮ್ಮುದಯಕ್ಕೆ ಸಾಗಿರಲ್ ।
ಜಯದೊರೆಯಲ್ಕೆ ದೈವದನುಕೂಲತೆ ತಾನಿರಬೇಕು ನಮ್ಮೊಳೂ ॥ ೬ ॥

( ಪಡದೆಯಲ್ಲಿ )

ಪೂಜ್ಯರಾದ ಕಾಮಂದಕೀ ದೇವಿಯವರೆ ಮಾಲತಿಯನ್ನು ಕರಕೊಂಡ
ತೀವ್ರಬರಬೇಕೆಂದು ಸ್ವಾಮಿನಿಯವರ ಅಪ್ಪಣೆಯಾಗಿದೆ.

ಕಾಮಂದಕಿ—ಮಗಳೇ ಏಳು ಏಳು.

(ಎಲ್ಲರೂ ಎದ್ದು ಹೊರಡುತ್ತಾರೆ)

(ಮಾಲತೀ ಮಾಧವರು ಒಬ್ಬರನೊಬ್ಬರು ಅಂತಃಕರಣದಿಂದಲೂ ಪ್ರೇಮದಿಂದಲೂ ನ
ಡುತ್ತಾರೆ )

ಮಾಧವ—ಅಯ್ಯೋ ಕಷ್ಟವೇ ! ಮಾಲತಿಯ ಕೂಡ ಮಾಧವನ
ಹಾರಗಳು ಇಲ್ಲಿಗೇ ಮುಗಿದವು. ಅಯ್ಯೋ ದೈವವೇ.

॥ ಚಂಪಕ ॥

ಮೊದಲೊಳಗೊಂದೆ ಪ್ರೇಮರಸವನ್ನನುಕೂಲತೆಯಿಂದ ಮಿತ್ರನಂ ।
ತೊದಗಿಸಿ ಸೌಖ್ಯಮಂ ಕೊಡುವ ಕಾಲದೊಳೊಮ್ಮೆಲೆ ದೈವ ದುರ್ವಿಪಾ
ಕದ ಬಲದಿಂದೆ ಭೀಕರ ಮನೋರುಜ ಮೆನ್ನೊಳು ಸೇರಿತೀಗ ಮ ।
ತ್ತಿದು ಬಿಡದೆನ್ನ ನಿನ್ನು ಮುದದೋರದು ನನ್ನೊಳಗೆಂದು ಮುಂದೆ ತಾ

ಮಾಲತಿ--(ಬದಿಗೆ) ಎಲೈ ಮಹಾಪುರುಷನೇ, ನಯನಾನಂದಕರನೇ, ಇ
ನಿನ್ನ ಕಡಿಯ ದರ್ಶನವು.

ಲವಂಗಿಕೆ—ಅಯ್ಯೋ ಮಂತ್ರಿಗಳ ಈ ಕೃತ್ಯದಿಂದ ನಮ್ಮ ಈ ಗೆಳ
ಜೀವವು ಉಳಿಯುವದೋ ಇಲ್ಲೊ ಎಂದು ಚಿಂತೆ ಹುಟ್ಟಿತು.

ಮಾಲತಿ--ದುರಾಶೆಯು ಈಗ ಸಫಲವಾಯಿತು. ಈ ನಿರ್ದಯಕೃತ್ಯದಿಂದ ತಂದೆಯು ಕಟಕತನವು ಸಿದ್ಧವಾಯಿತು. ನನ್ನ ದುರ್ದೈವದ ಭಯಂಕರ ಕೃತ್ಯವು ಮುಗಿಯಿತು. ನಾನು ಯಾರನ್ನು ಹಳಿದೇನುಫಲ? ನನ್ನ ದೈವವೇ ಕಡಿಮೆ. ನಿರಾಶ್ರಿತಳಾದ ನಾನು ಯಾರನ್ನು ಮರೆಹೊಗಲಿ.

ಲವಂಗಿಕೆ--ಗೆಳತೀ ಇತ್ತಕಡಿಗೆ ಬಾ. (ಹೋಗುತ್ತಾರೆ)

ಮಾಧವ--ಈ ದೇವಿಯುದು ಮಾಧವನ ಮೇಲೆ ಸ್ವಾಭಾವಿಕವಾಗಿ ಪ್ರೀತಿ ಇರುವದರಿಂದ ಕನಿಕರ ಬಟ್ಟು ಸಮಾಧಾನ ಮಾತ್ರ ಹೇಳುವಳು. ಅಯ್ಯೋ ನನ್ನ ಜೀವಿತವು ಸಫಲವಾಗುವದು ಎಂಥ ಮಾತೋ ಏನೋ?(ವಿಚಾರ ಮಾಡಿ) ನರಮಾಂಸ ವಿಕ್ರಯದ ಹೊರ್ತು ನನಗೆ ಬೇರೆ ಉಪಾಯವು ತೋರಲ್ಲೊಲ್ಲದು. (ಎಲ್ಲರೂ ಕೇಳುವಂತೆ) ಗೆಳೆಯಾ ಮಕರಂದಾ ಮದಯಂತಿಕೆಯ ದೆಸೆಯಿಂದ ನಿನ್ನ ಮನಸ್ಸು ಹರಿಯುತ್ತಿದೆಯೋ?

ಮಕರಂದ--ಹೌದು

॥ ಚಂಪಕ ಮಾಲಾ ॥

ಹೊಡತಗಳಿಂದ ರಕ್ತ ಸುರಿಯುತ್ತಿರೆ ನನ್ನೊಳು ಬಾಲೆ ತನ್ನೊಳೇ ।
ಗಡಬಡಿಸಿರ್ದ ಕೋಮಲ ಕುರಂಗಿಯವೋಲ್ ಕಡುಭೀತಿಯಿಂದೆ ತಾ ।
ತಡಿಯದಲೋಡಿಬಂದು ಬಿಗಿದಪ್ಪಿದಳಮೃತಲಪ್ತ ದೇಹದಿಂ ।
ದುಡಿಗೆಯು ಜಾರಿಬೀಳುತಿರೆ ನೋಡವಳಿರ್ಪಳವನ್ನು ಕಂಡೆನಾಂ ॥ ೮

ಮಾಧವ—ಆ ಬುದ್ಧರಕ್ಷಿತೆಯ ಗೆಳತಿಯು ನಿನಗೆ ದೊರೆಯುವದು ಕಠಿಣವಿಲ್ಲ.

॥ ಉತ್ಪಲಮಾಲಾ ॥

ಸಿಂಗನಕೊಂದು ಬಾಲಿಕೆಯ ಜೀವನ ಸೀನುಳಿಸಿರ್ದ ನಿನ್ನೊಳಾ ।
ಲಿಂಗನಮಿತ್ತ ಕಾಮಿನಿಯಳನ್ಯರೊಳೆಂತು ವಿನೋದ ಪೊಂದುವಳ್ ।
ಕಂಗಳ ಶಾಂತವೃತ್ತಿಯೊಳು ನಿನ್ನನು ನೋಡುತ ಪ್ರೇಮಭಾವದಿಂ ।
ದಂಗನೆ ಪೇಳಿವಳ್ ನಿನಗೆ ನಿನ್ನೊಳು ನೆಟ್ಟಿಹ ತನ್ನ ಪ್ರೇಮವಂ ॥ ೯ ॥

ಆದ್ದರಿಂದ ಏಳು ವರದಾ ಸಿಂಧುಗಳ ಸಂಗಮದಲ್ಲಿ ಸ್ನಾನಮಾಡಿ ನಗರಕ್ಕೇ ಹೋಗುವ.

( ಎದ್ದು ಅತ್ತಿತ್ತ ಅಡ್ಡಾಡಿ )

ಮಕರಂದ— ಇದೇ ನೋಡು! ಆ ಮಹಾನದಿಗಳ ಸಂಗಮವು. ಇಲ್ಲಿ ನೋಡು.

॥ ಶಾರ್ದೂಲವಿಕ್ರೀಡಿತಂ ॥

ಮಿಂದೇಳುತ್ತಿರೆ ನಾರಿಯರ್ ಮುದುಡೆ ವಸ್ತ್ರಂ ತೋರಿ ಬಚ್ಚಿರ್ದ ಕಾ ।
ಯ ದೇಹಂಗಳ ಭಾಗಗಳ್ ತಟದೊಳೀಗಿಲ್ಲೆಲ್ಲ ಕಾಣುತ್ತಿರಲ್ ।
ಸೌಂದರ್ಯಾನ್ವಿತ ಹೇಮಕುಂಭ ಕುಚದೋಳ್ ಹಸ್ತಂಗಳನ್ನಿಟ್ಟು ಸಾ ।
ನಂದಂ ಸ್ವಸ್ತಿಕೆಯುಂ ತವಂ ಧರಿಸುವರ್ ನಾರೀ ಜನರ್ ಲೀಲೆಯೋಳ್॥೧೦॥

( ಹೀಗೆಂದು ಎಲ್ಲರೂ ಹೋಗುತ್ತಾರೆ- )

೪ನೆಯ ಅಂಕವು ಮುಗಿಯಿತು.

---

# ಐದನೆಯ ಅಂಕ.



[ ಭಯಂಕರವಾದ ಮತ್ತು ಹೊಳೆಯುವ ವೇಷವನ್ನು ಧರಿಸಿದ ಕಪಾಲಕುಂಡಲೆಯು ಆಕಾಶಮಾರ್ಗದಿಂದ ಬರುತ್ತಾಳೆ-

ಕಪಾಲಕುಂಡಲೆ—

॥ ಉತ್ಪಲಮಾಲಾ ॥

ಆರುದಳಂಗಳಂ ಬಿಗಿದು ನಾಡಿಗಳಿಂ ದಶರಿಚಕ್ರರೂಪದಿಂ ।
ವಾರಿಜದಂತೆ ಮಧ್ಯದೊಳು ಶೋಭಿಸುವಾತ್ಮವನಿಟ್ಟು ಭಕ್ತರೋಳ್
ತೋರುತ ರೂಪವಂ ಹೃದಯದೋಳ್ ನಿಜಸಿದ್ಧಿಗಳೀವ ದೇವನೇ ।
ಕೋರುವರೆಲ್ಲ ಸಾಧುಗಳು ನಿಶ್ಚಲ ಮಾನಸದಿಂದೆ ನಿನ್ನನೂ ॥ ೧ ॥

ಈಗ ಈ.

॥ ಮಂಜುಳವಾಣಿ ॥

ಲಯವಶದಿಂದಲಾತ್ಮನನು ಶಂಕರರೂಪದಿ ನಿತ್ಯವಲ್ಲಿ ನಾ ।
ನಯದೊಳು ನ್ಯಸ್ತನಾಗಿರುವ ಚಕ್ರದ ಷಟ್ಕದ ಮಧ್ಯದಲ್ಲಿ ನೋ ।
ಡಿಯುದಯ ಪೊಂದುತಿರ್ಪ ಮನುನಾಡಿಗಳಿಂದೆಳೆಯುತ್ತಿ ಪಂಚತ ।
ತ್ವಯುತತಿ ಶಕ್ತಿಯನ್ನು ನನಗಿಲ್ಲ ಪರಿಶ್ರಮ ಮೇಲೆ ಪಾರಲೂ ॥ ೨ ॥

॥ ಮಲ್ಲಿಕಾ ॥

ಕಂಠಪಲ್ಲಿಯ ರುಂಡಮಾಲೆಯು ಗಂಟೆಯೊಳ್ ನಲಿಯುತ್ತಿರಲ್ ।
ಗಂಟೆಗಳ್ ರವ ಮಾಡುತಿರ್ಪುದು ಕೇಳುತಿರ್ಪುದು ಶಬ್ದವೀ ।
ಗುಂಟು ಮಾಡುವದೆನ್ನ ವೇಷವು ಭೀಕರತ್ವದಿ ಭೀತಿಯಂ ।
ಬಂಟಳಾಗಿಹನಾನು ಬಾಂಬೊಲದಲ್ಲಿ ಪಾರುವ ಕಾಲದೋಳ್ ॥ ೩ ॥

ಮತ್ತೆ—

॥ ಚಂಪಕಮಾಲಾ ॥

ಜಡೆಗಳು ದಟ್ಟವಾಗಿಯುರೆ ಕಟ್ಟಿದೊಡೀಗವು ಪಾರೆ ಕಂಡಕಂ !
ಡೆಡೆಯೊಳು ಖಟ್ಟ ಗಂಟೆಗಳು ತಾಗುತೆಮಂಜುಳ ನಾದವೀವವೀ !

ಗೆತೆಬಿಡದೆನ್ನ ಗಂಟೆಗಳು ರುಂಡದವಾಲೆಯೊಳಾಡೆ ಗಾಳಿ ಮೆ। ।
ಲ್ಲಡೆಯೊಳು ಪಾರಿಸುತ್ತಿಹುದು ಕೇತನವಂ ಮಸು ನಾವದಲ್ಲಿ ತಾ ॥ ೪

( ಅತ್ತಿತ್ತ ತಿರುಗಾಡಿ ನೋಡಿ ) ಇಗೋ, ಇಲ್ಲೇ ಹಳೇ ಬೇವಿನೆಣ್ಣೆಯು... ಜಳ್ಳೊಳ್ಳಿಯನ್ನು ಹುರಪಳಿಸಿದರೆ ಬರುವಂಥ ನಾತದಿಂದ ಸೂಚಿಸಲ್ಪಟ್ಟ ಹೆಣ... ಉರಿಯು ಕಾಣುತ್ತದೆ. ಇಲ್ಲೇ ಸ್ಮಶಾನದ ಸವಿಾಪದಲ್ಲಿಯೇ ಕರಾಲೆಯ ಗುಡಿ ಇದ್ದಂತೆ ತೋರುತ್ತದೆ. ಅಲ್ಲ, ನಮ್ಮ ಅಘೋರಘಂಟ ಸ್ವಾಮಿಗಳ ಆಜ್ಞೆಯ ಮೇರೆಗೆ, ಅವರ ಮಂತ್ರಸಾಧನವು ಮುಗಿದ ಕೂಡಲೇ ಮಾಡುವ ಪೂಜೆಯ ದೆಶೆಯಿಂದ, ಈ ಹೊತ್ತು ವಿಶೇಷವಾಗಿ ಸಿದ್ಧತೆಯನ್ನು ಮಾಡಬೇಕಾಗಿದೆ. ನಮ್ಮ ಗುರುಗಳು ' ಮಗಳೇ ಕಪಾಲಕುಂಡಲೇ ಕರಾಳಾದೇವಿಗೆ ನಾನು ಮೊ... ದಲು ಬೇಡಿಕೊಂಡಂತೆ ಒಂದು ಸ್ತ್ರೀರತ್ನವನ್ನು ತರತಕ್ಕದ್ದು ' ಮತ್ತು ಅದ... ಇದೇ ನಗರದಲ್ಲಿರುವದು. ಎಂದು ಅಪ್ಪಣೆ ಯಾಗಿದೆ. (ಆಶ್ಚರ್ಯದಿಂದ ನೋಡಿ... ಇವನು ಬಲುಗಂಭೀರನೂ, ಸುಂದರನೂ, ಇದ್ದು ತಲೆಯಮೇಲಿನ ಜಡೆಯನ್ನು ಕಟ್ಟಿರುವನು. ಕಯ್ಯಲ್ಲಿ ಕತ್ತಿಯದೆ. ಮತ್ತು ಸ್ಮಶಾನವನ್ನು ಸೇರುತ್ತಿರುವನು. ಇವನ

॥ ಚಂಪಕ ॥

ಕುವಲಯದಂತೆ ಶಾಮಲ ಮನೋಹರಕಾಯವು ಬಾಡಿದಂತೆ ತೋ ।
ರುವದವದನಲ್ಲಿ ಚಂದ್ರಮನ ಹೋಲುವ ಮೋರೆಯು ಚಲ್ವಯಾನವೂ ।
ಕುವರನೊಳಿರ್ದ ಹಸ್ತದೊಳು ಮಾನವ ಮಾಂಸವು ರಕ್ತಸೋರಿಸು ।
ತ್ತವನೊಳುವಾಸಿಸುತ್ತಿರುವ ಸಾಹಸವುಂ ನೆರೆತೋರುತಿರ್ಪುದು ॥ ೫ ॥

( ನೋಡಿ) ಇವನೇ ಆ ಕಾಮಂದಕಿಯ ಮಿತ್ರನ ಮಗನು, ನರಮಾಂಸವನ್ನು ಮಾ... ರಲಿಕ್ಕೆ ಸಿದ್ಧನಾದ ಮಾಧವನು. ಇವನನ್ನು ತಕ್ಕೊಂಡು ನಾನು ಮಾಡುವದೇನು... ನಾನು ನನ್ನ ಇಷ್ಟಕಾರ್ಯವನ್ನು ಮಾಡುವೆನು. ಪಶ್ಚಿಮದಿಕ್ಕಿನಲ್ಲಿ ಸಂಧ್ಯಾಕಾ... ಲವು ಮುಗಿದಂತಾಯಿತು. ಯಾಕಂದರೆ,

॥ ಚಂಪಕ ॥

ಗಗನದೊಳೆಲ್ಲ ದಿಕ್ಕಿನೊಳು ಕೂಡಿತಮಾಲದ ಗುಚ್ಛದಂತೆ ಸು ।
ತ್ತೆಗೆದ ತಪೋಲತಾಗಣವು ಪರ್ಬಿದೆ ಭೂಮಿಯು ಪ್ರಾಂತಸ್ಥಿತಿಯಿಂ ।
ದೊಗೆಯುತಲಂಗನಂಜಲದಿ ಮಜ್ಜನಗೈಯುವಳಂತೆ ತೋರುತಿ ।
ರ್ದಗಮದಿ ಪರ್ಬಿಕಳ್ತಲೆ ಯುರಾತ್ರಿಯು ತಾಬಲಿತಂತೆ ತೋರ್ಪುದು ॥ ೬

( ಆಮೇಲೆ ಮೇಲೆ ಹೇಳಿದಂತೆ ಮಾಧವನು ಬರುತ್ತಾನೆ ).

ಮಾಧವ—

॥ ವೃತ್ತಮಲ್ಲಿಕಾಮಾಲೆ ॥

ಪ್ರೇಮದಿ ಕೂಡಿ ತಾ ಬೆಳೆಯಿತಾಕೆಯ ರಾಗವು ಪೆರ್ಚ್ಚುಗುರ್ತಿನಿಂ ।
ಕಾಮನ ಚೇಷ್ಟೆಗಳ್ ವಿಪುಲ ತೋರಿದ ವಾಕೆಯೊಳಾಗ ಪೆರ್ಚ್ಚು-ತಾ ।
ಕಾಮಿಸಿಯಾಟಗಳ್ ಸ್ಮರಣೆಯೊಳ್ ಬರಲಿಂದ್ರಿಯದಾಟ ನಿಂತುತೆ ।
ದ್ಧ್ಯಾನದೊಳೆನ್ನ ಮಾನಸವು ಮೋದದಿ ಲೀನವೆಯಾಗುತಿರ್ಪುದು ॥ ೭ ॥

ಮತ್ತೆ—

॥ ಸಾಕಿ ॥

ರಮಿಸುತ ಮಲ್ಲಿಗೆ ಕೇಸರ ವಿಡಿಸಿದ ಬಲ್ಮಲೆ ಸೊಬಗುಗಳಿಂದಂ ।
ರಮಣಿಯು ಕುತ್ತಿಗೆ ಮೇಲ್ಮುಖವಿರಿಸುತ ಬಗಿದಪ್ಪುವಳೆನ್ನೆಂದಂ ॥ ೮ ॥

ಇಲ್ಲವೆ ಇದು ದೂರೇ ಇರಲಿ.

॥ ಮಲ್ಲಿಕಾಮಾಲೆ ॥

ಕೋಮಲೇಂದು ಕಲಾದಿಯೋಳ್ ತಿರಿದೆಲ್ಲ ಸಾರದಿ ನಿರ್ಮಿತಂ ।
ಕಾಮಮಂದಿರವೆಂದು ಕಾಂಬೆನು ಕಾಂತೆಯಾನನವನ್ನು ನಾ ।
ಪ್ರೇಮದಿಂ ಮಮ ನೇತ್ರಮಾಕೆಯ ಕಾಣುತುತ್ಸವದಲ್ಲಿ ಚಿ ।
ದ್ಭೂಮಿಯೋಳ್ ಸುಖವೆಲ್ಲ ಕೂಡಿಸಿದಂತೆ ಮೋದವನೀವುದು ॥ ೯ ॥

ನಿಜವಾಗಿ ನೋಡಿದರೆ ಅವಳು ನನ್ನ ಕಣ್ಣೆದುರಿನಲ್ಲಿಲ್ಲವೆಂಬುವದರಿಂದಲೇ ಬಹಳೇನು ಹೆಚ್ಚುಕಡಿಮೆಯಾಗಿಲ್ಲ ಯಾಕೆಂದರೆ ಮೊದಲಿನ ಅವಳ ದರ್ಶನದ ದೃಢತರವಾದ ಸಂಸ್ಕಾರವು ನನ್ನ ಆತ್ಮಕ್ಕೆ ಮೇಲಿಂದಮೇಲೆ ನೆನಪಿಗೆ ಬರುತ್ತದೆ. ಅವಳ ತರತರದ ಸ್ಮರಣೆಗಳು ವಿಶಾಲವಾಗುವವು. ಈ ರೀತಿಯಿಂದ ನನ್ನ ಪ್ರಿಯತಮೆಯು ಮರೆಯಾದರೂ ನನ್ನ ಕಣ್ಣಮುಂದಿನ ಮೂರ್ತಿಯಂತಿರುವಳು ಅವಳಲ್ಲಿ ನನ್ನ ಮಾನಸ್ಸು ತಲ್ಲೀನವಾಗಿರುತ್ತದೆ. ಯಾಕೆಂದರೆ

॥ ಉತ್ಪಲಮಾಲಾ ॥

ಕಾಂತೆಯು ಲೀನಳಾಗಿಹಳು ನನ್ನೊಳಗಾಕೆಯು ಬಿಂಬಿಸಿರ್ದ್ದಳೇ ।
ಶಾಂತದಿ ಮೂಡಿಸಿರ್ದ್ದ ನೆರೆ ವಜ್ರದ ಲೇಪದಿ ಕೂಡ್ರಿಸಿರ್ದವೋಲ್ ।

ಕಂತುವಿನ್ನೈದು ಬಾಣಗಳ ಕೀಲಗಳಿಂ ಜಿಗಿಯುತ್ತಲಾಕೆಯುಂ ।
ಚಿಂತೆಯ ತಂತುಜಾಲನೊಳು ನನ್ಮನದೋಳ್ ನೆರೆಕಟ್ಟಸಂತಿಹಳ್ ॥೧೦

( ತೆರೆಯಲ್ಲಿ ಗಲಿಬಿಲಿಯಗುತ್ತದೆ )

ಮಾಧವ—( ಕೇಳಿ ) ಓಹೋ, ರಾಕ್ಷಸರು ಹಿಂಡುಗಟ್ಟಿ ಇತ್ತಿಂದತ್ತ ಅತ್ತಿಂದಿತ್ತ ತಿರುಗಾಡುತ್ತಿರುವದರಿಂದ ಈ ಸ್ಮಶಾನವು ಎಷ್ಟು ಭಯಂಕರವಾ ತೋರುತ್ತದೆ. ಇಲ್ಲಿ,

॥ ಚಂಪಕ ಮಾಲೆ ॥

ಸುಡುತ ಕತೇವರಂಗಳನು ದೂರದಿ ದಟ್ಟಗೆ ಸುತ್ತಿ ಪರ್ಬುತಿ ।
ರ್ದೆಡೆಬಿಡದಿಲ್ಲಿ ತುಂಬಿರುವ ಕಳ್ತಲೆಯುಂ ಬಿತೆ ತೋರುತಿರ್ಪುದು ।
ಗಡಿಬಿಡಿಯಿಂದ ಲೀಲೆಯೊಳು ಮೋದಿಸಿ ಪೂತನಭೂತ ಸಂಘ ವೀ ।
ಗೆಡೆಬಡದಾಡುತಿರ್ದು ಕರತಾಡನದಿಂ ನೆರೆಕೂಗುತಿರ್ಪುದೂ ॥ ೧೧ ॥

ಆದ್ದರಿಂದ ಗಟ್ಟಿಯಾಗಿ ಕೂಗುವೆನು. ಎಲೆ, ಎಲ್ಲೆ ಸ್ಮಶಾನದಲ್ಲಿ ಹೆ ನವರಾದ ಕಟಪೂತನರೇ,

॥ ಕಂದ ॥

ನರಮಾಂಸವಿದನು ಕೊಳ್ಳಿರಿ ।
ವರಭೂತಗಳಿದನು ಮುದದಿ ಸೇವಿಸಬಹುದೀ ॥
ಪುರುಷಾಂಗಗಳನು ಕಯ್ದುವು ।
ಪರಿದಿಲ್ಲವು ಮೋಸವಲ್ಲ ಕಟಪೂತನರೇ ॥ ೧೨ ॥

( ತೆರೆಯಲ್ಲಿ ಮತ್ತೆ ಗಲಿಬಿಲಿಯಾಗುವದು )

ನಾನು ಕರೆದ ಕೂಡಲೇ ಈ ಸ್ಮಶಾನಭೂಮಿಯಲ್ಲಿ ಅತ್ತಿತ್ತ ಅಡ್ಡಾಡ ಈ ಪಿಶಾಚಿಗಳು ಭಯಂಕರವಾಗಿ ಒದರಿ ಚೀರಿ ಗೊಂದಲನೆಬ್ಬಿಸಿದ್ದರಿ ಈ ಸ್ಮಶಾನವು ಸರಿದಾಡುವಂತೆ ತೋರುತ್ತದೆ. ಇದೇನಾಶ್ಚರ್ಯವು.

॥ ಮತ್ತೇಭವಿಕ್ರೀಡಿತ ॥

ನಿಡಿದಾದೀ ತುಟಿಯಿಂದ [illegible] ದಂತ [illegible] ತುಂಬಿಬಾಯ್ ।
ಕೊಡಹುತ್ತಿರ್ಪರೆಯಿಂದಲಿ [illegible] ಸುಗ್ಗಳ್ [illegible] —ಮೂ ।

ಸಿಡಿಲನ್ನೋಲುವ ಹುಬ್ಬುವಿೂಸೆಯುವೆಯಿಂದಿತ್ತಿಂದಲತ್ತೋಡು ವೀ ।
ಕಡು ವಿಕ್ರಾಳ ವಿರೂಪಿಗಳ್ ನಡುವಿನೊಳ್ಕಣಲ್ಪೆ ತುಂಬಿರ್ಪುವೊ ॥ ೧೩ ॥

ಮತ್ತೆ—

॥ ಭದ್ರಕಂ ॥

ಪೂತನಚಕ್ರವಿೂಗ ನರಮಾಂಸವನ್ನಳತೆಗೆಟ್ಟು ತಿನ್ನುತಿರಲಾ ।
ಭೂತಗಳಿಂದೆ ಬೀಳುತಿರಲರ್ಧ ತುತ್ತುಗಳವನ್ನು ತೋಳಗಳು ಮೇಣ್ ।
ಪ್ರೀತಿಯಲುಂಡು ಗುರ್ಗುರಿಸಲುನ್ನತಾಸ್ಥಿಗಳು ಖರ್ಜೂರ ದ್ರುಮದವೋಲ್ ।
ಸುತ್ತಿದ ಕಪ್ಪು ಚರ್ಮದೊಳು ನಾಡಿಯಿಂಬಿಗಿದು ಕಟ್ಟಿದಂತೆಸೆವುವೂ ॥ ೧೪ ॥

(ಸುತ್ತುಮುತ್ತು ನೋಡಿ ನಕ್ಕು) ಈ ಪಿಶಾಚಿಗಳದು ಏನು ಭಯಂಕರ ಸ್ವರೂಪವಿದು? ಯಾಕೆಂದರೆ,

॥ ಕಂದ ॥

ಹಳೆಯ ಒಣಚಂದನಗಿಡ ।
ದೊಳಹೊದರಿನೊಳಿಂದೆ ಹೊರಟ ನಾಗನತೆರದಿಂ ॥
ಕಳೆಗುಂದಿದುದ್ದ ದೇಹದಿ ।
ಬಲುದೂರದಿ ಚರಿಸ ರಸನವಿೂಗತಿಭಯುದಂ ॥ ೧೫ ॥

( ತಿರುಗಾಡಿ ನೋಡಿ ) ಛೇ ಅತಿ ನಿಂದ್ಯವಾದ ಕೃತ್ಯವು ಎದುರಿನಲ್ಲಿಯೇ ನಡೆದದೆ.

॥ ಕಂಸಗತಿ ॥

ಹರಿಯುತ ಮಾಂಸದಿ ತುಂಬಿದ ಬಾಹುಗಳಂ ತೊಡೆಕುಂಡಿಗಳಂ ತೊಗಲಂ।
ತೆರೆಯುತ ನಾರುವ ಮಾಂಸವ ಜಗ್ಗುತ ತಿನ್ನುತ ಹಲ್ಲುಗಳಂ ಕಿಸಿದೀ ।
ನರಕಿ ಕರಂಕವನಂಕದೊಳಿಟ್ಟದರಲ್ಲಿಯು ಮಾಂಸವ ತಿನ್ನಲು ತಾ ।
ಹರಿಯುತಲಕ್ರಮದಿಂ ದೊಳಸೇರಿದ ಕಣ್ಣೊಳು ನೋಡುತ ಭಕ್ಷಿಪುದು॥ ೧೬ ॥

ಮತ್ತೆ—

॥ ಚಂಪಕ ॥

ಶವಗಳ ದೇಹ ಬೆಂಕಿಯೊಳಗಿಟ್ಟಿರೆ ಮಜ್ಜವು ಕುದ್ದು ಸೂಸೆ ಮೇಣ್ ।
ಬಿವರಿಸಲಸ್ಥಿ ನೋಡುತ್ತಲೆ ವಾರಿಗೆ ಜಗ್ಗುತೆ ಘೂಮುಮುಕ್ರಮಂ ।

ಪ್ರವಿಸುವ ಮಜ್ಜುವನ್ನು-ಭುಜಪಾರ್ಶ್ವದಿ ಹೀರುತ ಭೂತಯೂಥವೀ ।
ಗವಸರದಿಂದೆ ಬೆಂದಿರುವ ಸೋರುವ ಮಾಂಸವ ತಿನ್ನುತಿರ್ಪುದು ॥ ೧೭ ॥

( ನಕ್ಕು ) ಪ್ರದೋಷಕಾಲದಲ್ಲಿ ಈ ಪಿಶಾಚ್ಯಗಳು ಎಂಥ ವಿನೋದ ಮಾಡುತ್ತಿರುವವು.

॥ ಚಂಪಕ ॥

ಕರಳುಗಳಿಂದ ಮಂಗಲದ ಮಾಲೆಯ ಮಾಡುತ ಪೆಣ್ಣು ಭೂತಗಳ್ ।
ಕರಗಳ ಪೆಣ್ಣು ಪ್ರೇತಗಳೊಳಿಂದಲೆ ಜಗ್ಗುತ ಕುಂಡಲೆಂದವಂ ।
ತ್ವರಿತದೊಳೆತ್ತಿ ಮತ್ತೆ ಹೃದಯಂಗಳ ಮಾಲೆಯ ಮಾಡಿ ದಟ್ಟನೆ ।
ತ್ವರದ ಸರಾಯಿಯಂ ಶಿರಕಪಾಲದಿ ಸೇವಿಸುತಿರ್ಪವಿಲ್ಲಿಯೂ ॥ ೧೮ ॥

ಅಡ್ಡಾಡಿ (ಮತ್ತೊಮ್ಮೆ 'ನರಮಾಂಸಮಿದನು' ಇತ್ಯಾದಿ ಅಂದು) ಇದೇನು! ಒಮ್ಮೆಲೆ ಬಲು ಭಯಂಕರ ರೂಪವನ್ನು ತೋರಿಸಿ ಇಲ್ಲದಂತಾದವು. ಇವುಗಳಲ್ಲೇನೂ ಸತ್ವವಿಲ್ಲ. (ನೋಡಿ) ಇಲ್ಲಿಗೆ ಸ್ಮಶಾನವು ಮುಗಿದಂತಾಯಿತು. ಯಾಕಂದರೆ ಇಲ್ಲೇ ಎದುರಿನಲ್ಲಿ

॥ ಚಂಪಕ ॥

ಧಡದೊಳು ಗೂಬೆಗಳ್ ಕುಳಿತು ಪಲ್ಲವಕುಂಜಗಳಲ್ಲಿ ಘೊಕ್ಕೆನು ।
ತೃಡೆಬಿಡದಿಲ್ಲ ಕೂಗೆ ನರಿಗಳ್ ಧ್ವನಿಮಾಡುತೆ ತುಂಬಿದಂಡೆಯೋ ।
ಳಿಡೆಬಿಡದಿಲ್ಲ ತಾಗುತಿರುವಸ್ಥಿಯ ತುಂಡುಗಳಿಂದೆ ತುಂಬಿ ತಾ ।
ಗಡಣದಿ ಸಾಗುತಿರ್ಪ ನದಿ ರುದ್ರನ ಭೂಮಿಯ ದಾಂಟಿ ತೋರ್ಪುದು ॥೧೯॥

( ತೆರೆಯಲ್ಲಿ )

ಅಯ್ಯೋ ನಿರ್ದಯನಾದ ತಾತನೇ ! ನೀನು ಅರಸನ ಮನವಲಿಸುವ ಪೆಶೆಯಿಂದ ಸಾಧನವಾಗಿ ಮಾಡಿಕೊಂಡ ಜೀವವು ಕೊಲ್ಲಲ್ಪಡುತ್ತದೆ.

ಮಾಧವ—( ಆಶ್ಚರ್ಯದಿಂದ )

॥ ತ್ರಿಪುದಿ ॥

ಕೇಳಬರುವದು ಸಂಕಟದೋಹ ತರುಣಿ ಕುರವರಿಯು ನಾದವೂ।
ಶೀಳತೆನ್ನಯ ಹೃದಯಮಂ ಸಲೆ ಪಾಚಿತ ಸ್ತ್ರೀರೋದನಂ ।

ಕೀಳಲೊಲ್ಲವು ಕಾಲು ಮುಂದಕೆ ಮೂಡಲೇ ನೀ ಸ್ಥಿತಿಯೊಳು ।
ಪೇಳಲಾರೆನು ಯೇಕೆನನ್ನೊಳು ತಣ್ಣಗಾಗಿಹವಂಗಗಳ್ ॥ ೨೦ ॥

॥ ಕಂದ ॥

ಕಾಲಿಯ ಗುಡಿಯಿಂದಲೆ ನಾ ।
ನಾಲಪೆನೀ ದೀನಸ್ವರವನಿದು ನಿಶ್ಚಯದಿಂ ॥
ಹಾಳು ಕೃತಿಯನ್ನು ಸೂಚಿಸಿ ।
ಪೇಳುವದದು ಕೆಟ್ಟ ಕೃತಿಗೆ ತಾಣವೆನುತ್ತಂ ॥ ೨೧ ॥

ಒಳ್ಳೇದು ನೋಡುವೆನು. ( ಹೀಗೆಂದು ಅತ್ತಿತ್ತ ನೋಡುತ್ತಾನೆ ).

(ಆ ಮೇಲೆ ದೇವಿಯ ಪೂಜೆಯಲ್ಲಿ ಮಗ್ನರಾದ ಕಪಾಲಕುಂಡಲೆಯೂ ಅಘೋರಘಂಟನೂ, ಬಲಿಕೊಡಲಿಕ್ಕೆ ಸಿದ್ಧಮಾಡಿದ ಮಾಲತಿಯೂ ಪ್ರವೇಶಿಸುತ್ತಾರೆ)

ಮಾಲತಿ—ಅಯ್ಯೋ ನಿರ್ದಯನಾದ ತಾತನೇ, ಅರಸನ ಮನವಲಿಸುವದಕ್ಕಾಗಿ ಸಾಧನವೆಂದು ಮಾಡಿಕೊಂಡ ಈ ಜೀವವು ಕೊಲ್ಲಲ್ಪಡುತ್ತದೆ. ಅಯ್ಯೋ ಮಾತೆಯೇ ದುರ್ದೈವವನ್ನು ತಪ್ಪಿಸಲಾರದೆ ಮನಸಿನಲ್ಲಿಯೇ ನೊಂದುಕೊಂಡಿ. ಎಲೈ ಪರಮಪೂಜ್ಯಳಾದ ಕಾಮಂದಕೀದೇವಿಯೇ, ಮಾಲತಿಯು ನಿನ್ನ ಪ್ರಾಣವಾಗಿದ್ದಳು. ಅವಳ ಮನಸ್ಸಿನಲ್ಲಿದ್ದಂತೆ ಮಾಡುವದೇ ನಿನ್ನ ಜೀವಿತದ ಮುಖ್ಯ ಉದ್ದೇಶವಾಗಿತ್ತು. ನನ್ನ ಮೇಲೆ ನೀನು ಈ ರೀತಿಯಿಂದ ಪ್ರೀತಿಮಾಡಿದ್ದರಿಂದಲೇ ನಿನಗೆ ಬಹುಕಾಲದವರೆಗೆ ದುಃಖವಾಗುವದು—ಜೀವದ ಗೆಳತೀ ಲವಂಗಿಕೇ ನನ್ನ ದರ್ಶನವು ನಿನಗೆ ಇನ್ನು ಸ್ವಪ್ನದಲ್ಲಿಯೇ ಆಗುವದು.

ಮಾಧವ—ಅಹಾ ಈಗ ನನ್ನ ಸಂಶಯವು ದೂರಾಯಿತು. ಇವಳು ಜೀವದಿಂದಿರುವಾಗಲೇ ನನಗೆ ದೊರೆಯ ಬಹುದೇ? ( ಅವಸರದಿಂದ ಹೋಗುವನು )

ಕಾಪಾಲಿಕ ಕಾಪಾಲಿಕೆಯರು —ದೇವೀ ಭಗವತೀ ಮಹಾಕಾಳೀ ನಮಸ್ಕರಿಸುವೆವು

॥ ಮಲ್ಲಿಕಾ ಮಾಲೆ ॥

ಕಾಳದೇವಿಯು ನೀನು ಭೂಮಿಯು ಮೆಟ್ಟಲಾಗದು ಭಾರವಂ ।
ತಾಳಲಾರದು ಕೂರ್ಮತನ್ನಯ ಬೆನ್ನು ಬಾಗಿಸುತಿರ್ಪನು ।

ಏಳು ಲೋಕಗಳೆಲ್ಲ ನಿನ್ನಯ ಗಲ್ಲದಲ್ಲಿರಿಸಿರ್ಪೆ ಪಾ ।
ತಾಳದಲ್ಲಿರಿಸಿರ್ದವೋಲ್ ಶಿವಚಾರಪೂಜಿತೆ ವಂದಿಪೆ ॥ ೨೨ ॥

ಮತ್ತೆ—

ದಂಡಕ (ಸಂಗ್ರಾಮ)

ಕರಿಯಲೊಗಲು ಗುರ್ಗಳಿಂ ಸೀಳೆ ಚಂದ್ರಂ ಸುಧಾಧಾರೆ·ಸೋರುತ್ತಿರಲ್ ।
ಜೀವಿಸಿಪಾಕ–ಪಾಲಂಗಳಿಂ ದೇವತಾ ಸಂಘದೋಳ್ ಭೀತಿಪುಟ್ಟಿರ್ದು
ಸ್ತೋತ್ರಂಗಳಂ ಗೆಯ್ಯುತಾ ನಾಟ್ಯದೋಳ್ ತೋರ್ಪರೂ ।
ಕರಿಯ ಭುಜಗಗ್ರಂಥಿಯುಂ ಸೊತ್ತಲಾ ಭೂಷಣಂತೇಗಿ ಮೇಲೆದ್ದು ಕಾರಲ್
ವಿಷಜ್ಯೋತಿಯುಂ ಕಂಡು ತಾ ಬಾಹುವಲ್ಲಾಡಿಸಲ್ ಸುತ್ತುಮುತ್ತೆಲ್ಲಿ ದಿಗ್
ಭಾಗದೋಳದ್ರಿ ಸಂಘಂಗಳಂ ಚಲ್ಲಿದಂ ।
ಗರನೆ ಶಿರವಸುತ್ತೆ ತಾಬೆಂಕಿಯುಂ ಬೀರುತಿರ್ದಗ್ನಿನೇತ್ರಂ ದಿಶಾಭಾಗಮೆಲ್ಲಂ
ಸರಂಗಟ್ಟಿಯೊಂದಾಗಿರಲ್ ದೇವಖಂಟ್ವಿ ಮಹಾಶೃಂಗಮುಂ ತಳ್ತು ಮೇಲೇ
ರೆ ತಾರಾಗಣಂ ಪಾರಿತು ।
ಪೊರೆಯೆ ಸುಖವನೆಮ್ಮೊಳಿತ್ತೀಗ ನೀಭೂತಯೂಥಂ ಮಹಾಪ್ರೀತನರ್ ಕೂಡಿ
ಸ್ತೋತ್ರಂಗಳಂ ಮಾಡೆ ಕರ್ಣಂಗಳೋಳ್ ತುಂಬೆ ನೀ ಭೀತಿಯಿಂ ಸಾಂಬ
ನನ್ನಪ್ಪ ತಾತಂಗೆ ಸೌಖ್ಯಂಗಳಂ ಬೀರುತಿರ್ದಾರ್ಂಬಿಕೇ ॥ ೨೩ ॥ ( ಹೀಗೆಂದು
ನಾಟ್ಯಮಾಡುವರು )

ಮಾಧವ—( ದಿಟ್ಟಿಸಿನೋಡಿ )–ಅಯ್ಯೊ ಎಂಥ ಪ್ರಮಾದವಿದು?

॥ ಚಂಪಕ ॥

ವಸುಸುತೆಯಂತೆ ಭೂರಿವಸು ಕನ್ನಿಕೆ ಸಮ್ಮುಖದಲ್ಲಿ ನಿಂತಿಹಳ್ ।
ವಸನವ ಮಾಲೆಯಂ ಧರಿಸಿ ರಕ್ತದ ಬಣ್ಣದವನ್ನು ತೋಳ್ಗಳ್ ।
ಹಸಿಯುತ ಪಾಪಬುದ್ಧಿಯೊಳು ತಂದಿಹ ಜಿಂಕೆ ಕಠೋರ ದೈವದಿಂ ।
ದಸುವನು ಮೃತ್ಯುವಕ್ತ್ರದೊಳಗಿಟ್ಟಿರುವಂತಿಹಳೀಕೆ ಮುಖದೋಳ್ ॥ ೨೪ ॥

ಕಪಾಲ ಕುಂಡಲೆ—

॥ ಮಲ್ಲಿಕಾ ಮಾಲೆ ॥

ಕಾಲ ನಿನ್ನನು ಬಾಲೆಕೇಳ್ ತ್ವರೆಯಿಂದ ನಿರ್ದಯನೊಯ್ವನೂ ।
ಲೋಲನಿರ್ದೊಡೆ ನಿನ್ನೊಳಿಂದಿಗೆ ಯಾತನಂನೆನೆ ಯೀಗಲೇ ।

ಮಾಲತಿ—ಅಯ್ಯೋ ನನ್ನ ಇಷ್ಟ ದೇವನಾದ ಮಾಧವನೇ, ನಾನು ಪರಲೋಕಕ್ಕೆ ಹೋದರೂ ನೀನು ನನ್ನನ್ನು ಮರಿಯಬಾರದು. ತನ್ನ ಪ್ರಾಣಪತಿಯಿಂದ ನೆನಿಸಲ್ಪಟ್ಟವಳು ಸತ್ತಂತೆ ಯಲ್ಲ.

ಕಪಾಲಕುಂಡಲೆ—ಅಯ್ಯೋ, ಪಾಪ. ಈ ಬಡಪ್ರಾಣಿಯೂ ಮಾಧವನಲ್ಲಿ ಮನಸ್ಸಿಟ್ಟಿರುವಳು.

ಅಘೋರಘಂಟ—

॥ ಮಲ್ಲಿಕಾ ॥

ಕಾಲಿದೇವಿಯೆ ಸಿದ್ಧಿಯಂ ದಯಪಾಲಿಸೀಗಲೆ ಯನ್ನೊಳೂ ।
ಬಾಲೆಯಂ ನಿನಗರ್ಪಿಸಿಪೆನು ನೀನು ಸ್ವೀಕರಿಸಂದದಿಂ ॥ ೨೫ ॥

ಮಾಧವ—(ಒಮ್ಮೆಲೆ ಓಡಿಬಂದು ಮೊಳಕೈ ಹಿಡಿದು ಕತ್ತಿಯನ್ನು ಕೆಡಿವಿ)——ಥೂ ಪಾಪಿಯೇ ನೀಚತಿರುಕನೆ! ಬದಿಗಾಗು ನೀನೇ ಸಾಯುವಿ ನೋಡು ?

ಮಾಲತಿ—ಶೂರ ಪುರುಷರೇ ನನ್ನನ್ನು ಉಳಿಸಿರಿ

(ಮಾಧವನನ್ನು ಅಪ್ಪಿಕೊಳ್ಳುವಳು)

ಮಾಧವ—ಸತ್ಕುಲದಲ್ಲಿ ಹುಟ್ಟಿದವಳೇ ಅಂಜಬೇಡ.

॥ ವಸಂತತಿಲಕ ॥

ಮೀನಾಕ್ಷಿಪೇಳರುನೆ ಮೃತ್ಯುವಿನಾಂತಕಾಲ ।
ಕ್ಕೆನ್ನಲ್ಲಿ ನೀಮನವನಿಟ್ಟಿಹ ಮಾತನೀಗಳ್ ।
ನೀನಿನ್ನ ಭೀತಿಬಿಡು ಪಾಪಿಯು ತನ್ನ ಕರ್ಮ ।
ಕ್ಕೀ ನನ್ನ ಖಡ್ಗದೊಳು ಪೊಂದುವ ದಂಡವಂತಾ ॥ ೨೬ ॥

ಅಘೋರಘಂಟ—ಛೀ ಇದೇನು? ಇವನಾರು? ನಮಗೆ ಅಡ್ಡೀ ಮಾಡಲಿಕ್ಕೆ ಬಂದನಲ್ಲ.

ಕಪಾಲಕುಂಡಲೆ—ಸ್ವಾಮಿ ಸ್ ಇವನೇ ಇವಳ ಪ್ರೀತಿಪಾತ್ರನು ಕಾಮಂದಕಿಯ ಗೆಳಿಯನ ಮಗನಾದ ಮಾಧವನು ನರಮಾಂಸ ಮಾರಲಿಕ್ಕೆ ಬಂದವನು.

ಮಾಧವ—( ಕಣ್ಣಿಗೆ ನೀರು ತಂದು )—ಸದ್ಗುಣಮಣಿಯೇ ಇದೇನು?

ಮಾಲತಿ—( ತುಸು ಹೊತ್ತಿನಮೇಲೆ ಉಸುರ್ಗರೆದು ) ಶೂರ ಪುರುಷರೇ ನನಗೂ ಗೊತ್ತಿಲ್ಲ. ಉಪ್ಪರಿಗೆಯ ಮೇಲೆ ಮಲಗಿದ್ದೆನು ಇಲ್ಲಿ ಎಚ್ಚರಾಯಿತು. ಇಷ್ಟೇ ಗೊತ್ತು. ನೀವು ಇತ್ತಕಡಿಗೆ ಬಂದಕಾರಣವೇನು ?

ಮಾಧವ—( ನಾಚಿ )

॥ ಮಂದಾಕ್ರಾಂತಾ ॥

ನಿನ್ನಂ ನಾಪ್ರೇಮದಿ ಬಯಸಿ ಮೇಣ್ ಧನ್ಯ ಮಾಡಲ್ಕೆ ನನ್ನಂ ।
ಖಿನಂ ಬಂದೀ ಸುಡುವಡವಿಯೊಳ್ ಮಾಂಸಮಂ ಕೊಂಡು ನನ್ನೊಳ್ ।
ನಿನ್ನನ್ನೀಯಲ್ ಬಹುಕುಶಲನಂ ಭೂತನಂ ನೋಡುತಿರ್ದೆ ।
ನಿಂನಾಕ್ರಂದಂ ಕಿವಿಗೆ ಬರುತಲ್ ಬಂದೆನೀ ದೇಗುಲಕ್ಕೆ ॥ ೨೭ ॥

ಮಾಲತಿ––( ಬದಿಗೆ ) ಏನು, ನನ್ನ ದೆಶೆಯಿಂದ ಇವರು ತಮ್ಮ ಜೀವದ ಹಂಗುದೊರೆದು ತಿರುಗಾಡುತ್ತಿರುವರಲ್ಲ !

ಮಾಧವ—ಇದೇನಾಶ್ಚರ್ಯವು! ಇದೇ ಕಾಕತಾಲೀಯ ನ್ಯಾಯವು-

॥ ಉತ್ಪಲಮಾಲಾ ॥

ರಾಹು ವಿನಾಸ್ಯದೊಳ್ ಚಿಪ ಚಂದ್ರಮನಂತಿವಳಿರ್ದ ದೈವದಿಂ ।
ಬಾಹುಗಳಿಂದ ರಾಕ್ಷಸನ ಕಯ್ದುವಿನಿಂದೆಳೆಯುತ್ತೆ ಕಾಯ್ದೆ ನಾ !
ಸ್ನೇಹದಿ ಮಾನಸಂ ಕರಗಿ ಭೀತಿಯೊಳಂಜಿತು ಕ್ರೋಧವಿಸ್ಮಯ ।
ಕ್ಕಾಹುತಿಯಾಗಿ ಮೋದದೊಳಗೀಗರಳಿರ್ದದೆಂತು ಪೇಳಲಿ ॥ ೨೮ ॥

ಅಘೋರಘಂಟ—ಎಲೈ ಹಾರುವ ಪೋರನೇ

॥ ಮತ್ತೇಭ ವಿಕ್ರೀಡಿತಂ ॥

ಮರಣಕ್ಕೆನ್ನಿತ ಮುಂದೆ ತಂದೆರಳಿಯಂ ವ್ಯಾಘ್ರಾಂಕದೊಳ್ ನಿಂದುದಂ ।
ತ್ವರೆಯಿಂ ಕಾಯಲು ಬಂದ ಗಂಡರಳಿಯೊಲ್ ನೀಬಂದೆ ನನ್ನಾಸ್ತ್ರದೊಳ್ ।
ಹರಕಾಂತಾ ಮಣಿಯಳ್ಗೆ ನಿನ್ನ ಶಿರವಂ ಕೊಂಡರ್ಪಿಸುತ್ತಿರ್ಪೆನೀ ।
ಗುರುಶಸ್ತ್ರಂ ಸುರಿಸುತ್ತೆ ನಿನ್ನೊಳಿಹ ಕೆಂನೀರಂ ದೃಢಾಘಾತದಿಂ ॥ ೨೯ ॥

ಮಾಧವ—ಛೀ ನೀಚ ಹೊಲಿಯನೇ ದೇವದ್ರೋಹಿಯೆ.

॥ ಚಂಪಕ ಮಾಲಾ ॥

ಅಳಿಯಲು ಮೂರುಲೋಕದೊಳ ಗುಕ್ತಮನಂದೆ-ನಿಶಿರ್ದ ರನ್ನಮಂ ।
ಕಳೆಯಲು ಸಾರವಂ ನರನ ಬಾಳುವೆಯಲ್ಲಿಯ ನೋಟದಾಶಯಂ ।
ಶಳಿಯಲು ಬಂಧು ವರ್ಗದಸುವಂ ಮದನೋತ್ಸವನನ್ನು ದ್ವೇಷದಿಂ ।
ದಿಳಿಯನು ಹಾಳುಮಾಡಲು ದುರಿಚ್ಛೆಯು ನಿನ್ನೊಳಗಿಂದು ಬಂದಿತು ॥೩೦॥

ಮತ್ತೆ ಎಲೆ ಎಲೆ ಪಾಪಿಯೇ

॥ ವಸಂತ ತಿಲಕ ॥

ಲೀಲಾವಿನೋದದೊಳು ಸಿರ್ಸಲ ಪೂವಿನಿಂದಂ ।
ಬಾಲಾಂಗದೊಳ್ ಸದೆಯು ಮೈತ್ರಿಣಿ ತಾಳಳೀಕೆ ।
ಲೋಲಾಂಗಿಯಂನಳಿಯುಲೀಗಲೇ । ಕೈದುವಂ ನೀ ।
ಮೇಲೆತ್ತಿರಲ್ ತಲೆಗೆ ದಂಡನನಿಕ್ಕುತಿರ್ಪೆಂ ॥ ೩೧ ॥

ಅಘೋರಘಂಟ— ಥೂ ಪಾಪಿಯೇ, ತಾಳು ತಾಳು ಇಕೋ ನೋಡು ನಿನ್ನನ್ನು ಇಲ್ಲದಂತೆ ಮಾಡಿಬಿಡುವೆನು?

ಮಾಲತಿ— ತಡೆಯಿರಿ, ತಡೆಯಿರಿ, ಶೂರಪುರುಷರೇ ತುಸು ತಡೆಯಿರಿ. ಈ ನೀಚನು ಬಲು ಭಯಂಕರ ಪ್ರಾಣಿ ಇರುವನು. ನನ್ನನ್ನುಳಿಸಿ ಈ ಸಂಕಟ ದೊಳಗಿಂದ ಪಾರಾಗಿರಿ.

ಕಪಾಲಿಕುಂಡಲೇ— ಗುರುಗಳೇ, ಎಚ್ಚರದಿಂದ ಈ ನೀಚನನ್ನು ಕೊಲ್ಲಿರಿ.

ಮಾಧವ ಅಘೋರ ಘಂಟರು— (ಮಾಲತಿ ಕಪಾಲ ಕುಂಡಲೆಯನ್ನು ನೋಡಿ)

॥ ಮಾಲಿನೀ ॥

ಹರಿಯು ಕರಿಯು ಕೊಲ್ಲಲ್ ತಪ್ಪನೆಂದೆಂದಿಗೂ ಮೇಣ್ ।
ಹರಿಣವಳಿಯ ಲಾತಂಗೇನು ಕಷ್ಟಂ ಪ್ರಮಾದಂ ।
ಬರದು ಬೆದರ-ಜೇಡೀಗೀತ ತನ್ನಾಸುನಂ ತಾ ।
ಬರಿದೆ ಕಳೆಮು ಕೊಳ್ಳಲ್ಬಂಮು ನಿಂತಿರ್ಪನಿಲ್ಲೀ ॥ ೩೨ ॥

(ತೆರೆಯಲ್ಲಿ ಗಲಿಬಿಲಿ ಯಾಗುತ್ತದೆ ಎಲ್ಲರೂ ಕೇಳುತ್ತಾರೆ.)

ಎಲ ಎಲೋ ಮಾಲತಿಯನ್ನು ಹುಡುಕುವ ಜನರೇ ಪರಮ ಪೂಜ್ಯರಾದ ಕಾಮಂದಕೀ ದೇವಿಯವರು ಭೂರಿವಸು ಮಂತ್ರಿಗಳನ್ನು ಸಮಾಧಾನ ಗೊಳಿ ಸುತ್ತಿರುವರು. ಅವರ ಜ್ಞಾನ ದೃಷ್ಟಿಗೆ ಎಣೆ ಇಲ್ಲ. ಈ ದುರ್ಗಾ ದೇವಿಯ ಗುಡಿಗೆ ಮುತ್ತಿಗೆ ಹಾಕಿರೆಂದು ಅವರ ಅಪ್ಪಣೆಯಾಗಿದೆ.

॥ ಕಂದ ॥

ಕಾಲಿಗೆಯಾಹುತಿಯುಂದಾ ।
ಬಾಲೆಯನೊಯ್ದಿಹನ ಘೋರಘಂಟನು ಬಲದಿಂ ॥

ಲೀಲೆಯೊಳು ಪೇಳ್ವಳೀ ಕಥೆ।
ಬಾಲೆಯು ಹಿತಚಿಂತೆಯಿಂದ ಕಾಮಂದಕಿ ತಾ ॥ ೩೩ ॥

ಕಪಾಲ ಕುಂಡಲೇ— ಗುರುಗಳೇ, ನಮಗೆ ಮುತ್ತಿಗೆ ಹಾಕಿರುವರು.

ಅಘೋರಘಂಟ— ಈಗ ನಾನು ಶೌರ್ಯತೋರಿಸಲಿಕ್ಕೆ ಹೆಚ್ಚು ಆಸ್ಪದ ಶಿಕ್ಕಂತಾಯಿತು.

ಮಾಲತಿ— ಅಯ್ಯೋ ತಾತನೇ ಅಯ್ಯೋ ದೇವೀ ।

ಮಾಧವ— ಒಳ್ಳೇದು ಇವಳನ್ನು ತನ್ನ ಬಳಗದಲ್ಲಿ ಕೂಡಿಸಿ ಅವಳ ಕಣ್ಣ ಮುಂದೇ ಇವನನ್ನು ಕೊಲ್ಲುವೆನು. (ಮಾಲತಿಯನ್ನು ಒಂದು ಬದಿಗೆ ಸರಿಸಿ ಮುಂದಕ್ಕೆ ಸರಿದು)

( ಮಾಧವ ಅಘೋರ ಘಂಟರು ಒಬ್ಬರನ್ನೊಬ್ಬರು ಉದ್ದೇಶಿಸಿ )

ಥೂ ಪಾಪಿಯೇ,

॥ ಮಲ್ಲಿಕಾಮಾಲೆ ॥

ಕುಯ್ದುವೀಗಿದು ನಿನ್ನ ಗಾತ್ರಗಳನ್ನು ತುಂಡರಿಸುತ್ತೆ ತಾ ।
ಹೊಯ್ದುಗಂಟಲುವನ್ನು ಜಣ್ಣನೆ ಗಂಟು ಬಿದ್ದಿಹ ಸ್ನಾಯುಸಂ ।
ಕೊಯ್ದು ಮಧ್ಯದಿ ನಿಂತು ಮಾಂಸದ ಪಿಂಡದೋಳ್ ಬಲುವೇಗದಿಂ।
ತೊಯ್ದು ಮಣ್ಣಿನೊಳಿಟ್ಟವೋಲ್ ಚರಿಸುತ್ತಲಿರ್ಪುದು ಸರ್ರನೆ ॥ ೩೪ ॥

( ಎಲ್ಲರೂ ಹೋಗುತ್ತಾರೆ. )

ಐದನೇಯ ಅಂಕ ಮುಗಿಯಿತು.

---

# ಆರನೆಯ ಅಂಕ.

( ಕಪಾಲ ಕುಂಡಲೆಯು ಬರುತ್ತಾಳೆ. )

ಕಪಾಲಕುಂಡಲೆ— ಎಲೈ ಪಾಪಿಯೇ, ದುಷ್ಟನೇ, ಮಾಲತಿಯ ದೆಶೆಯಿಂದ ನಮ್ಮ ಗುರುಗಳನ್ನು ಕೊಂದ ನೀಚ ಮಾಧವನೇ, ಆ ಕಾಲಕ್ಕೆ ನಾನು ನಿನ್ನನ್ನು ಕನಿಕರವಿಲ್ಲದೆ ಹೊಡೆದರೂ ನೀನು ನಾನು ಹೆಂಗಸೆಂದು ನನ್ನ ಕಡಿಗೆ ಲಕ್ಷ ಕೊಡಲಿಲ್ಲ. ( ಸಿಟ್ಟಿಗೆದ್ದು ) ಕಪಾಲಕುಂಡಲೆಯು ಸಿಟ್ಟಿನ ಫಲವನ್ನು ನೀನು ಕಂಡುಕೊಳ್ಳಲಿಕ್ಕೇ ಬೇಕು.

॥ ಕಂದ ॥

ನಿನ್ನನು ಕಚ್ಚಲು ನಾಗಿಣಿ ।
ಸನ್ನಿಧಿಯೋಳ್ ನಿಸಿತ ದಂಷ್ಟ್ರದಿಂ ವಿಷಕಾರು ।
ತ್ತುನ್ನತ ವೈರದಿ ನಿಂತಿರ ।
ಲಿನ್ನೆಲ್ಲಿಯು ಶಾಂತಿ ನಿನಗೆ ಪನ್ನಗವೈರೀ ॥ ೧ ॥

( ತೆರೆಯಲ್ಲಿ )

॥ ಹರಿಣೀ ॥

ಅರಸರು ವಯೋವೃದ್ಧರ್ ಪೇಳ್ದಂತೆ ಮಂಗಲ ಕಾರ್ಯದೋಳ್ ।
ಚರಿಸುತಿರ–ಬೇಕೀಕಾಲಕ್ಕೆಲ್ಲ ವಿಪ್ರರವೃಂದವು ।
ಗುರುತರದೊಳಿಂಪಾಗಿದಾಶೀರ್ವಚಂ । ಗಳ ಪೇಳ್ವುದು ।
ವರನ ಕಡೆಯಿಂದೆಲ್ಲರ್ ಬೀಡಾರದಿಂ ಪೊರಮಟ್ಟಿಹರ್ ॥ ೨ ॥

ಮಂಗಲಕಾರ್ಯವು ಎಡರಿಲ್ಲದೆ ಕೊನೆಗಾಣುವದಕ್ಕೋಸ್ಕರ, ಮಾಲತಿಯು ಬೀಗರು ಬರುವದರೊಳಗಾಗಿಯೇ ನಗರ ದೇವತೆಯ ಗುಡಿಗೆ ಹೋಗ ತಕ್ಕದ್ದೆಂದು ಪರಮ ಪೂಜ್ಯರಾದ ಕಾಮಂದಕೀ ದೇವಿಯವರ ಅಪ್ಪಣೆಯಾಗಿದೆ. ಮತ್ತು ಪರಿಚಾರಕರು ಯಾವತ್ತು ವಸ್ತ್ರಾಲಂಕಾರಗಳನ್ನು ತಕ್ಕೊಂಡು ಸಿದ್ಧರಿರ ಬೇಕೆಂದು ಹೇಳಿರುವರು.

ಕಪಾಲಕುಂಡಲೆ— ಒಳ್ಳೇದು. ಇಲ್ಲಿ ಮಾಲತಿಯ ವಿವಾಹದ ಕೆಲಸದಲ್ಲಿ ಸಾವಿರಾರು ಜನರು ತೊಡಗಿರುವರು. ಇಲ್ಲಿಂದ ಹೊರಟು ಹೋಗಿ ಮಾಧವನಿಗೆ ಅಪಕಾರ ಮಾಡುವ ಹಂಚಿಕೆಯ ಬಗ್ಗೆ ವಿಚಾರ ಮಾಡುವೆನು. ( ಹೀಗೆಂದು ಹೋಗುತ್ತಾಳೆ. )

## ಶುದ್ಧವಿಷ್ಕಂಭಕ.

— ೦ —

ಕಲಹಂಸ— ( ಪ್ರವೇಶಮಾಡಿ ) ನನ್ನೊಡ್ಯಾ ಮಾಧುರಾಯರು ಮಕರಂದಣ್ಣನ್ನ ಕರಕೊಂಡ ದ್ಯಾಮವ್ವನ ಗುಡ್ಯಾಗದಾನ ಮತ್ತ ಮಾಲತಮ್ಮನಾದ ಇಕಾಡೆ ಹೊಂಟುದಾರಿಲ್ಲೋ ತಿಳಕೊಂಡ ಬಾ ಅಂತ ನನಗ ಹೇಳಿದಾನ ಇವಗೊಂದೀಟ ಆನಂದಾಗು ಹಾಂಗ ಮಾತಾಡತೇನ.

( ಮಾಧವ ಮಕರಂದರು ಬರುತ್ತಾರೆ. )

ಮಾಧವ—

॥ ಮಲ್ಲಿಕಾಮಾಲೆ ॥

ನೋಡೆ ಮಾಲತಿಯನ್ನು ಪುಟ್ಟಿತು ಕಾಮಬಾಧೆಯು ನನ್ನೊಳೀ ।
ಗಾಢಪ್ರೇಮವು ತೋರಿತಾಕೆಯ ಕಾಮಚೇಷ್ಟೆಗಳಿಂದೆ ತಾ ।
ಬೀಡು ಮಾಡಿತು ಪೆರ್ಚಿತೀಗದು ವೇಗದಿಂದಲೆ ನನ್ನೊಳೂ ।
ಕೇಡುಮಾಡಲಿ ಸಾಧ್ಯವಾಗಲಿ ಯೋಗಿನೀ ಕೃತಿಯಿಂದಿಗೆ ॥ ೩ ॥

ಮಕರಂದ— ಸ್ವಾಮಿನಿಯ ಬುದ್ಧಿ ಚಾತುರ್ಯವು ಹೇಗೆ ನಿಷ್ಫಲವಾದೀತು ?

ಕಲಹಂಸ— (ಸಮೀಪಕ್ಕೆ ಬಂದು) ಮುಜರಿ ಮಾಡತೆದೇವ್ರು ಮಾಲತೆಮ್ಮನಾರ ಇಕಡೇನ ಹೊಂಟರ್ರಿ.

ಮಾಧವ— ಇದು ನಿಜವೋ ?

ಮಕರಂದ— ನಂಬಿಗೆ ಇಲ್ಲದವನಂತೆ ಹೀಗೇನು ಕೇಳುವಿ ? ಹೊರಟರು ವಳಿಷ್ಟೇ ಅಲ್ಲ. ಇಲ್ಲಿ ಸಮೀಪದಲ್ಲಿಯೇ ಬಂದಿರುವಳು ಯಾಕಂದರೆ

॥ ವಸಂತ ತಿಲಕ ॥

ನೋಡಿಲ್ಲಿ ಮೋಡಗಳು ಗಾಳಿಯ ಯೋಗದಿಂದೀ ।
ಗೀಡಾಡಿದಂತೆ ದನಿಮಾಡುವ ವಾದ್ಯನಾದ ।

ಕ್ಕಾಡಿರ್ದ ಮಾತುಗಳು ಕೇಳವು ನಮ್ಮ ನಮ್ಮೊಳ್ ।
ಬೇಡಿಲ್ಲಿ ಸಂಶಯು ಸುಲೋಚನೆ ಬಂದಳೀಗಳ್ ॥ ೪ ॥
ಆದ್ದರಿಂದ ಬಾಕಿಟಿಕಿಯೊಳಗಿಂದ ನೋಡುವ.

( ಅದರಂತೆ ಮಾಡುವರು. )

ಕಲಹಂಸ— ನೋಡ್ರಿ ದ್ಯಾವರು. ಚಾಮರಗೋಳ ನೋಡ್ರಿ. ಹಿಂದ ಹಿಂಡಿಗಿಂಡ ರಾಜಹಂಸಗೋಳ ಹಾರ್ಯಾಡಿಧಾಂಗ ಹಾರ್ಯಾಡತಾವ. ಮತ್ತ ಅವರಲೆ ನಿಸಾನಿಗೋಳ ಹ್ಯಾಂಗ ಹಾರ್ಯಾಡತಾವ ನೋಡ್ರಿ. ಈ ಬೀಳೀ ಕೊಡಿಗೋಳ ನೋಡ್ರಿ. ಮುಗಲ ನೋಡಾಕ ಒಂದ ಹೊಂಡಥಂಗ ಕಾಣತತಿ. ಅದರಾಗಿನ ಉದ್ದನ ದೇಟನ ಕವಾಳ ಧುವಗೋಳ ಸರದಾಡಿಧಾಂಗ ಗಾಳಿಗಿ ಸರದಾಡತಾವ ಈ ಹೆಣ್ಣಾನಿಗೋಳ ನೋಡ್ರಿ. ಹ್ಯಾಂಗ ಬಂಗಾರದ ಗಂಟಿ ಸರಗೋಳ ಕಟಿಗೊಂಡ ಜಣಾ ಜಣಾ ಬಾರಸತಾವ. ಅವುದರ ವ್ಯಾಲ ಕುಂತ ಪಾತರದ ಸಾನಿಗೋಳ ನೋಡ್ರಿ ಹಿಂಡಿಗಿಂಡ ಅದಾರ. ಅವರ ಮೈಮೇಲಿನ ವಸ್ತ್ರಾವಡಿವಿಗೋಳ ಕಾಮಣ್ಣನ ಬಿಲ್ಲಿನಾಂಗ ಹೊಳೂತಾವ. ಮುಗಲ ತುಂಬಾ ಅದರದ ಬೆಳಕ ಬಿದ್ದತಿ. ಅವರ ಮೋಜಲೆ ಯಲೆಡಕಿ ಹ್ಯಾಂಗ ಹಾಕತಾರ, ದುಂಡನ ಗಲ್ಲದಾಗ ಕವಳಾ ತುಂಬಿಕೊಂಡ ಬಾಯಿತುಂಬಾ ದನಿತಗದ ಮಂಗಳಾರ್ತಿ ಪದಗೋಳ ಹ್ಯಾಂಗ ಹಾಡತಾರ, ಇದರರ್ಲೆನ ಮುಗಲೆಲ್ಲಾ ತುಂಬಿ ಹೋಗೇತಿ.

( ಮಾಧವ ಮಕರಂದರು ಆಶ್ಚರ್ಯದಿಂದ ನೋಡುವರು )

॥ ಚಂಪಕಮಾಲೆ ॥

ಬದಿಯೊಳು ಸೋಗೆಕಣ್ಣುಗಳು ಚಾಷಕ ಯೂಥವು ಪಾರುತಿರ್ದುವು ।
ತ್ರೈದುರಿ ಸೊಳಿಂದ್ರ ಚಾಪ ಬೆಳಗುತ್ತಿರುವಂದದಿ ರತ್ನರಾಶಿಗಳ್ ।
ವಿಧವಿಧ ಚೀನವಸ್ತ್ರಗಳು ತೋರುವ ಚಿತ್ರಗಳಿಂದೆ ಶೋಭಿಸು ।
ತ್ರೈದುರಿನೊಳಿಲ್ಲಿ [illegible] ವ ನೆರೆಜೀರು ತಿರ್ಪವೊ ॥ ೫ ॥

ಕಲಹಂಸ—ಇಲ್ಲಿ ನೋ[illegible] ಂವೀಸ ಮಂದಿ ಆಳಗೋಳ ತಮ್ಮ ಕಯ್ಯಾಗಿನ ಬೆಳ್ಳಿಬಂಗಾರದ ಬೆತ್ತಗೋ[illegible] ಲಿಕಿಳಿಸಿ ದುಂಡಗ [illegible]ರಿಕೊರದಾಂಗ ನಿಂತರ ಉಳವ ಮಂದೆಲ್ಲಾ [illegible]. ಆಚೀಕ ಮಾಲತೆಮ್ಮನಾರ ಇಳ

ದರ. ಪಾಪ! ಬಿದಿಗಿ ಚಂದ್ರಾಮನಾಂಗ ಎಟ್ಟ ಸೊರಗೀದಾರ ಮನಸಿಗೆ ಪೆಟ್ಟಾ ಗೇತಿ ಅದಕ ಬಾಡಿ ಬೆಳ್ಳಗಾಗೀದಾರ ಎಲ್ಲಾ ಮಂದಿ ಬಾಯಿ ತೆರಕೊಂಡ ದಿಟ್ಟಿಸಿ ನೋಡತ ನಿಂತತಿ ಅಮ್ಮನವರ ಹತ್ತಿರದ ಆನೀ ನೋಡ್ರಿ. ದಟ್ಟಾಗಿ ಚಂದರ ಬಣ್ಣಾ ಮಾರಿಗೆ ಬಳದ್ವಾರ ಅದಕ ಮೂರೂಚಂಜಿ ಚಂದ್ರಾಮನಾಂಗ ಕಾಣತತಿ ಈ ಜೋತಾಡು ಪದಕಗೊಳ ಹ್ಯಾಂಗ ತಾರಕ್ಕಿ ಹಂಗ ಹೊಳು ತಾವ ಇದರ ಮ್ಯಾಗ ಅಮ್ಮನವರಂದರ ಒಂದ ದೊಡ್ಡ ವಸ್ತಾ ಇಟ್ಟಾಂಗ ಆಗಿತ್ತ.

ಮಕರಂದ—ಗೆಳಿಯನೇ ನೋಡು.

॥ ಉತ್ಪಲ ಮಾಲಾ ॥

ಪೂವಳಿದಂತರಂಗದೊಳು ಬಾಡಿದ ವಲ್ಲಿಯು ಶೋಭೆಯಿಂದಲೀ । ಗೀವಧು ಬೆಳ್ಳಗಾಗಿ ಸಿರಿಯುಂ ತೊಡವುಂಗಳಗಿತ್ತು ಮತ್ತೆ ಕೇಳ್ । ಜೀವಕೆ ಕಾಮ ಬಾಧೆ ತಗಲಿರ್ಪುದು ಪೆರ್ಚುತಲಿರ್ಪುದೆಂದು ತೋ । ರ್ದೀ ವಿಧ ಲಗ್ನ ಸಂಭ್ರಮಬೋಳೊಪ್ಪವಳೀಕೆ ಮನೋಹರಾಂಗಿ ತಾ ॥ ೬ ॥

ಹೆಣ್ಣಾನೆಯು ಕಾಣತತಲ್ಲ!

ಮಾಧವ—(ಆನಂದದಿಂದ) ಕೆಳಗಿಳಿದ ಕೂಡಲೇ ದೇವಿಯನ್ನೂ ಲವಂಗಿಕೆ ಯನ್ನೂ ಕೂಡಿಕೊಂಡು ಬಂದೇ ಬಿಟ್ಟಳಲ್ಲ.

( ಕಾಮಂದಕಿಯೂ ಮಾಲತಿಯೂ ಲವಂಗಿಕೆಯೂ ಬರುತ್ತಾರೆ. )

ಕಾಮಂದಕಿ—(ಆನಂದದಿಂದ ತನ್ನಷ್ಟಕ್ಕೆ)

॥ ವಸಂತತಿಲಕ ॥

ಬೊಮ್ಮಾದಿಗಳ್ ನಮಗೆ ಬೇಡಿದ ಸಿದ್ಧಿಯಂ ನಿ ।
ತ್ತೆಮ್ಮೆಲ್ಲರಿಚ್ಛೆಗನುಕೂಲತೆಯನ್ನು ಕೊಟ್ಟರ್ ।
ದುಮ್ಮಾನವನ್ನಳಿದರೀ ಶುಭಕಾರ್ಯದಲ್ಲೀ ।
ಗಂಮ್ಮಿತ್ರ ಬಾಲರ ವಿವಾಹದ ಸಾಧಿಸೀಗಳ್ ॥ ೭ ॥

ಮಾಲತಿ—(ತನ್ನಷ್ಟಕ್ಕೆ) ದೈವವು ಉಪಾಯ ಮಾಡಿದನೆ ಈಗ ನನಗೆ ಮರಣ ಬಂದೀತು! ಮತ್ತು ನಾನು ಹೇಗೆ ಮಾಡುವೆನು! ನನ್ನಂಥ ದುರ್ಧೈವಿಯು ಈಗ ಮರಣವನ್ನು ಬಯಸಿದರೂ ಅದು ಸಹ ದುರ್ಲಭವೇ ಸರಿ.

ಲವಂಗಿಕೆ—ಈ ಅನುಕೂಲವಾದ ನೋಸದಿಂದ ನನ್ನ ಜೀವದ ಗೆಳತಿಗೆ ಬಲು ದುಃಖವಾಗುತ್ತಿರುವದು.

(ಸೇವಕಳು ಕಯ್ಯಲ್ಲಿ ವಸ್ತ್ರಾಭರಣಗಳ ತಬಕವನ್ನು ತಕ್ಕೊಂಡು ಪ್ರವೇಶ ಮಾಡುವಳು.)

ಸೇವಕಳು—ದೇವಿಯವರೇ, ಅರಸರು ಕಳಿಸಿಕೊಟ್ಟ ಈ ಮದಿವಿಯ ಉಡುಪುಗಳಿಂದ ದೇವತಿಯ ಮುಂದೆ ಮಾಲತೀದೇವಿಯನ್ನು ಸಿಂಗರಿಸಬೇಕೆಂದು ಅಮಾತ್ಯರು ಹೇಳಿಕಳಿಸಿರುವರು.

ಕಾಮಂದಕಿ—ಅದೇ ಮಂಗಲಕರವಾದ ಸ್ಥಾನವು. ಇತ್ತಕಡೆಗೆ ತೋರಿಸು ನೋಡುವ!

ಸೇವಕಳು—ಇದು ಬಿಳೇಪತ್ತಲವು. ಇದು ಬಣ್ಣದ ಮೇಲ್ಮುಸುಕು. ಇವು ಮೈಮೇಲಿಡತಕ್ಕ ಎಲ್ಲ ಅಭರಣಗಳು. ಇವು ಮುತ್ತಿನ ಸರಗಳು. ಇದು ಚಂದನವು. ಇದು ಬಿಳೇಹುವ್ವಿನ ಮಾಲೆ.

ಕಾಮಂದಕಿ—(ಬದಿಗೆ) ಮಕರಂದನು ನೋಡುವವರಿಗೆ ಇವುಗಳಿಂದ ಬಲು ಚಮತ್ಕಾರವನು. (ಎಲ್ಲರೂ ಕೇಳುವಂತೆ ಅವುಗಳನ್ನು ತಕ್ಕೊಂಡು) ಒಳ್ಳೇದು ಯಾಕಾಗಲೊಲ್ಲದೆಂದು ಮಂತ್ರಿಗಳಿಗೆ ಹೇಳು.

( ಸೇವಕಳು ಹೋಗುತ್ತಾಳೆ. )

ಕಾಮಂದಕಿ—ಲವಂಗಿಕೇ ಮಾಲತಿಯೂ ನೀನೂ ಕೂಡಿ ಗರ್ಭಗುಡಿಯಲ್ಲಿ ನಡೆಯಿರಿ.

ಲವಂಗಿಕೆ—ತಾವು?

ಕಾಮಂದಕಿ—ನಾನು ತುಸುಹೊತ್ತು ಏಕಾಂತದಲ್ಲಿ ಈ ಅಲಂಕರಣದ ರತ್ನಗಳು ಯೋಗ್ಯವವೆಯೋ ಇಲ್ಲವೋ ಎಂಬುವದನ್ನು ಶಾಸ್ತ್ರಕ್ಕನುಸರಿಸಿ ಪರೀಕ್ಷಿಸುವೆನು.

ಮಾಲತಿ—(ತನ್ನಷ್ಟಕ್ಕೆ) ಈಗ ಲವಂಗಿಕೆ ಯೊಬ್ಬಳೇ ನನ್ನಕೂಡ ಉಳಿದಳು. (ಕೇಳುವಂತೆ) ಇದು ದೇವರ ಗುಡಿಯ ಬಾಗಿಲವು. ಗೆಳತೀ ಒಳಗೆನಡೆ.

( ಇಬ್ಬರೂ ಒಳಗೆ ಹೋಗುತ್ತಾರೆ )

ಮಕರಂದ—ಇಲ್ಲಿ ನಾವಿಬ್ಬರೂ ಕಂಬದಮರೆಗೆ ನಿಂತುನೋಡುವ (ಹಾಗೇ ಮಾಡುತ್ತಾರೆ )

ಲವಂಗಿಕೆ-- ಇದು ಲೇಪನ ಗಂಧವು. ಇವು ಹುವ್ವಿನಸರಗಳು.

ಮಾಲತಿ-- ಮುಂದೆ.

ಲವಂಗಿಕೆ-- ಗೆಳತೀ ಈ ವಿವಾಹ ಮಂಗಲ ಕಾರ್ಯದಲ್ಲಿ ಸೌಭಾಗ್ಯ ಹೆಚ್ಚಳವ ಗೋಸ್ಕರ ದೇವತೆಯುನ್ನು ಪೂಜೆಮಾಡತಕ್ಕದ್ದೆಂದು ಅಪ್ಪನವರು ನಿನ್ನನ್ನು ಇಲ್ಲಿ ಕಳಿಸಿರುವರು.

ಮಾಲತಿ-- (ತನ್ನಷ್ಟಕ್ಕೆ); ನನ್ನ ದುರ್ದೈವದಿಂದ ಆರಂಭವಾದ ಈ ಭಯಂಕರ ಕೃತ್ಯವು ನನ್ನ ಮನಸ್ಸನ್ನು ಜರ್ಜರವಮಾಡಿರುವದು. ಈ ಮನ ಖೇದವನ್ನು ತಾಳಲಾರೆನು. ಮೇಲೆ ನೀನೇಕೆ ಪೀಡಿಸುವೆ?

ಲವಂಗಿಕೆ-- ಗೆಳತೀ ಏನು ಹೇಳಬೇಕೆನ್ನುತ್ತೀ?

ಮಾಲತಿ-- ನನಗೆ ದೈವವು ಪ್ರತಿಕೂಲವಾಗಿದೆ. ನಾನುಬೇಡಿ ವಸ್ತುವು ನನಗೆ ದೊರಕುವಂತಿಲ್ಲ. ಅಂದಮೇಲೆ ಏನು ಹೇಳುವದದೆ?

ಮಕರಂದ-- ಗೆಳಿಯನೇ ಕೇಳಿದಿಯಾ?

ಮಾಧವ-- ಹೌದು. ಮನಸಿನಲ್ಲಿ ಸಮಾಧಾನವಿಲ್ಲ.

ಮಾಲತಿ-- (ಲವಂಗಿಕೆಯನ್ನು ಅಪ್ಪಿಕೊಂಡು) ನನ್ನ ನಿಜವಾದ ಅಕ್ಕನೆ ಪ್ರೀತಿಯ ಗೆಳತೀ, ಲವಂಗಿಕೇ ಈ ನಿನ್ನ ಜೀವದ ಗೆಳತಿಯು ಅನಾಥಳಾಗಿ ಮ ಣದಬಾಯಲ್ಲಿ ಸಿಕ್ಕಿರುವಳು. ಹುಟ್ಟಿದಾರಭ್ಯ ನಿನ್ನಲ್ಲಿ ನನ್ನ ನಂಬಗೆ. ಅ ಕ್ಕನು ಸರಿಸಿ ಅಪ್ಪಿಕೊಂಡು ಬೇಡಿಕೊಳ್ಳುವೆನು ನಾನುಹೇಳಿದಂತೆ ನೀನು ಕೇಳ ತ್ತಿದ್ದರೆ, ನನ್ನನ್ನು ಎದೆಗವಚಿಕೊಂಡು, ಆ ನನ್ನ ಎಲ್ಲ ಸೌಭಾಗ್ಯಲಕ್ಷ್ಮಿಯೆ ದೇಹಧರಿಸಿ ಬಂದಂತಿರುವ ಮಾಧವನ ಮಂಗಲಕರವಾದ ಮುಖಕಮಲವನ ತೋರಿಸು (ಹೀಗೆಂದು ಅಳುವಳು)

ಮಾಧವ-- ಗೆಳಿಯಾ ಕೇಳಿದಿಯಾ?

ಚಂಪಕ ಮಾಲಾ ||

ಸಖಿಯಳಮಾತು ಬಾಡಿರುವ ನನ್ನಯ ಮಾನಸಪುಷ್ಪವನ್ನುತಾ ।
ವಿಕಸಿತ ಮಾಡಿ ಮೋಹಿಸಿತು ಗಾತ್ರಗಳಂತಣೆಸತ್ತ ಲಾತ್ಮವಂ ।
ಸುಖವನು ಬೀರಿತೊಂದೆ ರಸದಿಂಕೃತ ಯುಕ್ತನುಕೂಲ ಮೋದದಿಂ ।
ಕಳಲತೆಯಿಂದ ಕಾಮು..ಯ.. ..ಷಿಖಬೀರಿದಳಿಂದು ಪ್ರೇಮವಂ ॥ ಲ

ಮಾಲತಿ--ಗೆಳತೀ, ಆ ನನ್ನ ಜೀವವನ್ನುಳಿಸಿದವನು ನಾನು ಸತ್ತದ್ದು ಕೇಳಿ ದುಃಖಿಸಬಹುದು. ಆದರೆ ಅದರಿಂದ ಅವನ ರತ್ನದಂತಹ ದೇಹವು ಕೊರಗಬಾರದು. ನಾನು ಪರಲೋಕಕ್ಕೆ ಹೋದರು ಸಹ ಅವನು ಮೇಲಿಂದ ಮೇಲೆ ನನ್ನ ನೆನಪಿನ ಮಾತುಗಳನ್ನು ತೆಗೆದು ತನ್ನ ಜೀವಕ್ಕೆ ವ್ಯಸನ ಮಾಡಿಕೊಳ್ಳಬಾರದು. ಇವರಂತೆ ಏನಾದರೂ ನೀನು ಹುಚಿಕೆಯನ್ನು ಮಾಡು. ಅಂದರೆ ನನ್ನ ಇಚ್ಛೆಯು ಪೂರ್ಣವಾಗುವದು.

ಮಕರಂದ-- ಛೀ, ಇದು ಬಲು ದೀನ ಸ್ಥಿತಿಯು.

ಮಾಧವ--

॥ ಉತ್ಪಲ ಮಾಲಾ ॥

ಆಶಯು ಬಿಟ್ಟು ಮಾನಸದಿ ಕಾತರಳಾದ ಮನೋಹರಾಂಗಿ ತಾ।
ತೋಷಿಪಳೆನ್ನ ನೀಗ ತಲೆದೋರುವ ಮೋಸದಿ ಮತ್ತೆ ಖೇದವಂ।
ಪೋಷಿಪಳೆನ್ನೊಳೀಕೆ ಕರುಣಾಸ್ಪದ ರೋದನದಿಂದೆ ಮಾಡಿದೀ।
ಭಾಷೆಯು ಚಿಂತೆ ಖೇದನನು ಸಂತಸವಂ ಸಲೆ ಬೀರು ತಿರ್ಪುದೂ ॥ ೯ ॥

ಲವಂಗಿಕೆ-- ಏನೇ, ನಿನ್ನ ಅನುಂಗಲವು ದೂರಾಯಿತು.

ಮಾಲತಿ--ಗೆಳತೀ! ನಿಮಗೆ ಮಾಲತಿಯ ಜೀವಿತವು ಮಾತ್ರಬೇಕಾಗಿದೆ. ಅವಳ ಸೌಖ್ಯದ ಕಡೆಗೆ ನಿಮ್ಮ ಲಕ್ಷವಿಲ್ಲ.

ಲವಂಗಿಕೆ— ಗೆಳತೀ, ಹೀಗೇಕೆ ಮಾತಾಡುವಿ?

ಮಾಲತಿ— ಏನೇನೋ ಮಾತುಗಳನ್ನು ಹೇಳಿ ನನ್ನಲ್ಲಿ ಆಶೆಯನ್ನು ಹುಟ್ಟಿಸಿ ಇಲ್ಲಿಯವರೆಗೆ ಜೀವದಿಂದಿರಿಸಿ ಈ ಭಯಂಕರ ಪರಿಣಾಮವನ್ನು ಅನುಭವಿಸಲಿಕ್ಕೆ ಹಚ್ಚಿದಿರಿ. ಈಗ ನನ್ನಾಶೆ ಏನಂದರೆ, ಆ ವರಪುರುಷನಿಗೆ ಹೊರತಾದ ನನ್ನ ಈ ಪಾಪಿಯಾದ ಜೀವಿತವನ್ನು ಬಿಟ್ಟು ಸತ್ತುಹೋಗುವೆನು. ಇದರಲ್ಲಿ ಗೆಳತೀ ನೀನು ನನಗೆ ಅಡ್ಡಬರಬೇಡ. ( ಹೀಗೆಂದು ಕಾಲಿಗೆರಗುವಳು )

ಮಕರಂದ— ಇದು ಗೆಳೆತನದ ಅತಿರೇಕವಾಯಿತು.

( ಲವಂಗಿಕೆಯು ಮಾಧವನನ್ನು ಕಣ್ಣಿನಿಂದ ಕರೆಯುವಳು ).

ಮಕರಂದ—ಗೆಳೆಯನೇ, ಲವಂಗಿಕೆಯು ಸ್ಥಳದಲ್ಲಿ ನಿಲ್ಲು.

ಮಾಧವ— ನನಗೆ ನಾಚಿಕೆಯಿಂದ ಎಚ್ಚರವೇ ತಪ್ಪಿದೆ.

ಮಕರಂದ— ಕೆಲಸಗಳು ಕೈಗೂಡುವ ಸಮಯಕ್ಕೆ ಹೀಗಾಗುವದು, ಸಹಜವೇ.

( ಮಾಧವನು ತನ್ನಷ್ಟಕ್ಕೆ ಲವಂಗಿಕೆಯ ಸ್ಥಳದಲ್ಲಿ ನಿಂತುಕೊಳ್ಳುತ್ತಾನೆ ).

ಮಾಲತಿ—ಗೆಳತೀ ಅನುಕೂಲಳಾಗಿ ನನಗೆ ಒಪ್ಪಿಗೆಯನ್ನು ಕೊಡು.

ಮಾಧವ—

॥ ಕಂದ ॥

ಬಿಡು ಸಾಹಸದೊಳು ಬಯಕೆಯ ।
ಗಡಿಬಿಡಿಯಂ ಮುಗ್ಧೆ ಬಿಡು ಮನೋಹರಿ ನಿನ್ನಂ ।
ನೊಡಗೂಡದಿರುವ ದುಃಖವ ।
ತಡೆಯದು ಮನ್ಮನವು ಕೇಳೆ ಪೀನನಿತಂಬೀ ॥ ೧೦ ॥

ಮಾಲತಿ—ಗೆಳತೀ, ಮಾಲತಿಯು ಕಾಲುಬಿದ್ದು ಬೇಡಿಕೊಂಡಮೇಲೆ ನೀನು ಅಲ್ಲಗಳೆಯಬಾರದು.

ಮಾಧವ—

॥ ಕಂದ ॥

ಅಪ್ಪು ಬಿಗಿದೆನ್ನನೀಗಳೆ ।
ಯೊಪ್ಪುವಿಯಸುವನ್ನು ಬಿಡಲು ತಾಪವನಳಿಯಲ್ ॥
ಒಪ್ಪಲಿದಕೆಂತು ಜಘನದಿ ।
ಯೊಪ್ಪುವ ಪ್ರಿಯಸಖಿಯೆ ಪೇಳು ನೀ ತ್ವರೆಯಿಂದಂ ॥ ೧೧ ॥

ಮಾಲತಿ—(ಆನಂದದಿಂದ) ಆಂ ಒಪ್ಪಿದೆಯಾ (ಎದ್ದು ನಿಂತು) ಇಕೋ ನೋಡು ಆಲಿಂಗಿಸುವೆನು (ಆಲಿಂಗಿಸಿ ಆನಂದದಿಂದ) ನನ್ನ ಕಣ್ಣೀರು ಒಂದೇ ಸವನೇ ಹರಿಯುತ್ತಿರುವದರಿಂದ ನಿನ್ನನ್ನು ನಾನು ಕಣ್ಣಿನಿಂದ ನೋಡಲಾರೆನು. ( ಅಪ್ಪಿಕೊಂಡು ಆನಂದದಿಂದ ) ಗೆಳತೀ, ನಿನ್ನ ದೇಹದ ಸ್ಪರ್ಶವು ಬೇರೆಯಾಗಿ ತೋರುವದು. ರೋಮಾಂಚನಗಳಿದ್ದುದರಿಂದ ನಿನ್ನ ದೇಹವು ಕಮಲದ ಒಳಭಾಗದಂತೆ ಬಿರುಸಾಗಿದೆ. ನನ್ನ ಹೆಸರಿನಿಂದ ಕೈ ಮುಗಿದು, ಅವರಿಗೆ ಹೇಳುವವೇನಂದರೆ— ದುರ್ದೈವಿಯಾದ ನಾನು ಆ ಕಮಲದಂತೆ ಶೋಭಿಸುವ ದುಂಡನ್ನು ಮುಖಚಂದ್ರನನ್ನು ಮನದಣಿಯಾಗಿ ನೋಡಿ ಆನಂದಪಡಲಿಲ್ಲ. ಒಂದೇ ಸವನೇ ದುಃ

ಖವು ಹೆಚ್ಚಾಗುತ್ತಿದ್ದರೂ ಅದನ್ನು ತಡೆಯುವದಾಗದಿದ್ದರೂ— ಸುಳ್ಳುಕಲ್ಪನೆಗಳಿಂದ ಹೇಗಾದರೂ ಮಾಡಿ ಇಲ್ಲಿಯವರೆಗೆ ಜೀವ ಹಿಡಿದೆನು. ಹೆಚ್ಚಿಸುತ್ತಿದ್ದ ವೇದನೆಗಳನ್ನು, ನನ್ನ ಗೆಳತಿಯರು ಮಾಡುವ ಉಪಚಾರಗಳಿಂದ ಹೇಗಾದರೂ ಮಾಡಿ ತಡೆದೆನು. ಚಂದ್ರತಾಪ ಮಲಯ ತಂಗಾಳಿ ಮುಂತಾದವುಗಳನ್ನು ಹಾಗೂ ಹೀಗೂ ಸಹಿಸಿದೆನು—ಈಗಂತೂ ಎಲ್ಲ ಆಶೆ ಅಳಿದು ಹೋಯಿತೆಂದು ಹೇಳಬೇಕು—ಜೀವದ ಗೆಳತೀ, ನೀನು ಮಾತ್ರ ನನ್ನನ್ನು ಯಾವಾಗಲೂ ನೆನಪಿನಲ್ಲಿಡು. ಈ ಬಕುಲ ಮಾಲೆಯನ್ನು ಮಾಧವನು ತನ್ನ ಕರಕಮಲದಿಂದಲೇ ರಚಿಸಿರುವದರಿಂದ ಎಷ್ಟು ಮನೋಹರವದೆ ! ಇದು ಮಾಲತಿಯೇ ಎಂದು ತಿಳಿ. ಇದು ಯಾವಾಗಲೂ ನಿನ್ನ ಎದೆಯ ಮೇಲೆಯೇ ಇರಲಿ. (ಹೀಗೆಂದು ತನ್ನ ಕೊರಳೊಳಗಿನ ಬಕುಲ ಮಾಲೆಯನ್ನು ತೆಗೆದು ಮಾಧವನ ಎದೆಯಮೇಲೆ ಇರಿಸುವಷ್ಟರಲ್ಲಿ ಒಮ್ಮೆಲೇ ಹಿಂದಕ್ಕೆ ಸರಿದು ನಾಚಿ ನಡುಗುವಳು )

ಮಾಧವ——ಅಹಹ (ಬದಿಗೆ)

॥ ವಸಂತ ತಿಲಕ ॥

ಮೀನಾಕ್ಷಿ ತನ್ನ ಕುಚಕುಂಭಗಳಿಂದ ಲೆನ್ನಂ ।
ತಾನೀಗ ಚುಚ್ಚಿ ಮುದಬೀರುತ ನನ್ನ ಮೈಯ್ಯೊಳ್ ।
ಚನ್ನಾಗಿ ಚಂದನವ ತಾನಸಿಗಲ್ಲಿನಿಂದಂ ।
ಮುಂನಿಕ್ಕಿ ಶೈವಲ ಮೃಣಾಲದಿ ತೀವಿದಳ್ ಮೇಣ್ ॥ ೧೨ ॥

ಮಾಲತಿ—ಲವಂಗಿಕೆಯು ಮಾಲತಿಯನ್ನು ವಂಚಿಸಿದಳು.

ಮಾಧವ—ಏನು ನಿನ್ನ ಮನಸಿನ ವೇದನೆಗಳನ್ನು ಮಾತ್ರ ನೀನು ಬಲ್ಲಿ. ಬೇರಡನೆಯವರಿಗಾಗುವ ಬಾಧೆಗಳು ನಿನಗೆ ಗೊತ್ತಿಲ್ಲ. ಇಕೋ ನೋಡು.

॥ಮಲ್ಲಿಕಾ ಮಾಲೆ ॥

ನಿನ್ನಗೋಸುಗ ನಾನು ಕಾಂತೆಯೆ ತಾಳಲಿಲ್ಲವೆ ಪೆಚ್ಚುತಿ ।
ದುರ್ನಿವಾರ್ಯ ತಾಪವಂ ನಳಿಯುತ್ತಿದಂ ಮನದಲ್ಲಿಯೇ ।
ನಿನ್ನ ಸಂಗವ ಕಲ್ಪಿಸುತ್ತಸುವಂನು ನಿನ್ನಯ ಪ್ರೇಮವೂ ।
ನನ್ನೊಳಿರ್ದುದು ಕಂಡು ನಾತಡೆಯುತ್ತ ಬಂದೆನೆ ಮಾನಿನೀ ॥ ೧೩ ॥

ಲವಂಗಿಕೆ—ಗೆಳತೀ ನಿಜವಿದ್ದದ್ದನ್ನ ಹೇಳುವರು.

ಕಲಹಂಸ––ಎಲ್ಲಾ ಮಾತೂ ಏನ ಬೇಸಿ ಕೂಡಿ ಬಂತಪ್ಪಾ.

ಮಕರಂದ––ಭಾಗ್ಯಶಾಲಿನಿಯೇ ಕೇಳು.

॥ ಮಾಲಿನೀ ॥

ಮನಸಿನೊಳಿವನಂ ನೀಕಾಮಿಸುತ್ತಿರ್ದುದಂ ನೋ ।
ಡಿನಿತು ದಿನಗಳೀತಂ ಕಷ್ಟದಿಂ ಜೀವಿಸಿರ್ಪಂ ।
ಮನಸಿಜಗನು–ವಿತ್ತೀ ಹಸ್ತವಂ ಕಂಕಣಾಂಕಂ ।
ಮನವಲಿದಿವಗಿತ್ತಾನಂದದಿಂ ಬಾಳು ತಂಗೀ ॥ ೧೪ ॥

ಲವಂಗಿಕೆ––ಮಹಾರಾಯರೇ, ಇವಳು ಮನಸಿನಲ್ಲಿ ಅನುಮಾನಿಸ ತಾನಾಗಿಯೇ ಸ್ವೀಕರಿಸಬೇಕೆಂಬ ಕಲ್ಪನೆಗೆ ಇಂಬುಗೊಡುತ್ತಿರಲು ನೀವು ಪಾ ಗ್ರಹಣಕ್ಕೆಂದು ಅವಳನ್ನು ಕೇಳುವ ಅವಶ್ಯಕತೆ ಏನು ?

ಮಾಲತಿ––ಛೀ ಕನ್ಯಕೆಯರ ಶೀಲಕ್ಕೆ ವಿರುದ್ಧವಾಗಿ ಏನೇನೋ ಮಾತುಗಳು ಇಲ್ಲಿ ನಡಿದವೆ.

ಕಾಮಂದಕಿ––[ ಪ್ರವೇಶಮಾಡಿ ] ಅಂಜುಬುರುಕ ಮಗಳೇ ಇದೇನು.

[ಮಾಲತಿಯು ನಡುಗುತ್ತ ಕಾಮಂದಕಿಯನ್ನು ಅಪ್ಪಿಕೊಳ್ಳುವಳು.]

ಕಾಮಂದಕಿ––[ ಅವಳ ಗದ್ದವನ್ನು ಎತ್ತಿಹಿಡಿದು ] ಬಾಲೇ ?

॥ ಮಲ್ಲಿಕಾಮಾಲೆ ॥

ನಿನ್ನೊಳಿಕ್ಕಿದ ಕಣ್ಣು ಮಾನಿನಿ ಮುನ್ನಮಾನಸ ವರ್ಜಿಸೀ ।
ಖಿನ್ನನಾಗಲು ಕಾಯ ಬಾಡಿತು ನಿನ್ನನಾವರು ಕಾಮನು ।
ಸನ್ನುತಾಂಗಿಯೆ ಪೀಡಿಸುತ್ತಿಹ ಧನ್ಯಮಾಡಿವನನ್ನು ಮೇಣ್ ।
ಚನ್ನಿಗಂ ನೆನೆಸಿಲ್ಲ ಮಿರಿಯಲಿ ಬ್ರಹ್ಮಕಾರ್ಯವ ಸಾಧಿಸೀ ॥ ೧೫ ॥

ಲವಂಗಿಕೆ—ದೇವೀ, ಕೃಷ್ಣಚತುರ್ದಶಿಯ ರಾತ್ರಿಯಲ್ಲಿ ಸುಡುಗಾಡಿನ ತಿರುಗಾಡಿ, ಅನುಚಿತ ಕಾರ್ಯಗಳನ್ನು ಮಾಡಹೋಗಿ, ಆ ಭಯಂಕರ ದೇ ದ್ರೋಹಿಯನ್ನು ಕೊಂದ ಧೈರ್ಯಶಾಲಿಯು ಇವನೇ. ಅದರಿಂದ ನನ್ನ ಗ ತಿಯು ನಡುಗಿದಳು.

ಕಾಮಂದಕಿ—ಲವಂಗಿಕೇ, ಒಳ್ಳೇ ಹೊತ್ತಿಗೆ ಆ ಮಹದುಪಕಾರದ ಮ ಗಾಢಪ್ರೀತಿಯ ನೆನಪು ಮಾಡಿಕೊಟ್ಟೆ.

ಮಾಲತಿ—ಅಯ್ಯೋ ಅಪ್ಪನೇ ! ಅಯ್ಯೋ ಅವ್ವಾ !

ಕಾಮಂದಕಿ—ಮಗುವೇ ಮಾಧವನೇ.

ಮಾಧವ—ಏನಪ್ಪಣೆ ?

ಕಾಮಂದಕಿ—ಭೂರಿವಸು ಮಂತ್ರಿಗಳೆಂದರೆ ಯಾವತ್ತೂ ಮಾಂಡಲಿಕರು ಅವರ ಪಾದಕ್ಕೆ ತಲೆಬಾಗಿಸುವರು. ಅವರಿಗೆ ಈ ಮಾಲತಿಯು ಒಬ್ಬಳೇ ರತ್ನ ದೃಶ್ಯ ಮಗಳು. ಇವಳು ಯೋಗ್ಯ ವರನಲ್ಲಿ ಕೂಡುವದರಿಂದಾಗುವ ಆನಂದ ವನ್ನರಿತು ಬ್ರಹ್ಮನೂ ಮನ್ಮಥನೂ ನಾನೂ ಕೂಡಿ ಇವಳನ್ನು ನಿನಗೆ ಅರ್ಪಿಸಿ ರುವೆವು. ( ಹೀಗೆಂದು ಕಣ್ಣೀರು ಸುರಿಸುತ್ತಾಳೆ ).

ಮಕರಂದ—ದೇವೀ ತಮ್ಮ ಪಾದ ಪ್ರಸಾದದಿಂದ ನಮ್ಮ ಕಾರ್ಯವು ಸಫಲವಾಯಿತು.

ಮಾಧವ—ದೇವಿಯವರ ಕಣ್ಣಲ್ಲಿ ಇಷ್ಟೊಂದು ನೀರು ಬಂದ ಕಾರಣ ವೇನು ?

ಕಾಮಂದಕಿ—( ಶಾಟಯಿಂದ ಕಣ್ಣೀರು ವರಿಸುತ್ತ ) ನಿನ್ನ ಕಲ್ಯಾಣದ ಕೆಲವು ಮಾತುಗಳನ್ನು ನಿನಗೆ ಹೇಳಬೇಕೆನ್ನುವೆನು.

ಮಾಧವ—ಅದೇನು ?

ಕಾಮಂದಕಿ— ಬೇಡಿಕೊಳ್ಳುವೆನು.

ಮಾಧವ—ಏನಪ್ಪಣೆ ?

ಕಾಮಂದಕಿ—

॥ ಮಂದಾಕ್ರಾಂತಾ ॥

ನಿನ್ನಂಥಾ ಸದ್ಗುಣಿಯು ಪ್ರಣಯಂ ಸೌಖ್ಯದಂ ಮಂಗಲಾಂತ್ಯಂ।
ಬನ್ನಂಬಟ್ಟೀ ಸುಸಮಯವಯನೀಗಿಂದು ಕಂಡಳ್ಮೃಗಾಕ್ಷೀ ।
ಚನ್ನಾಗಿನ್ನಾದರಿಸು ತಿವಳನ್ನಿಟ್ಟುಕೊಳ್ಳಯ್ಯ ತೋರು ।
ತ್ತಿನ್ನಂ ನನ್ನೊಳ್ ಪರಿಚಯವನೀ ಬಾಲೆಯೋಳ್ ಪ್ರೇಮವಂ ನೀ ॥ ೧೬ ॥

( ಹೀಗೆಂದು ಪಾದಕ್ಕೆ ಬೀಳಹೋಗುವಳು )

ಮಾಧವ—ವಾತ್ಸಲ್ಯವು ಮರ್ಯಾದೆಯನ್ನು ಮೀರಹತ್ತಿತು.

ಮಕರಂದ—ದೇವೀ,

॥ ಮಲ್ಲಿಕಾಮಾಲೆ ॥

ನಚ್ಚರಿತ್ರದ ತೇಜದಿಂ ಬಹು ಶೋಭನಾಂಗದಿ ಬಾಲೆಯೊಳ್ !
ಉಚ್ಚವಂಶದಿ ಜನ್ಮದಿಂ ಮಮ ಮಿತ್ರನೋಳ್ ಮನವಿಟ್ಟಿರಲ್ ।
ಬಿಚ್ಚಿಬೇರಿಡಲೀ ಗುಣಂಗಳು ಪ್ರೇಮಕೊಂದಿರೆ ಸಾಕುಕೇಳ್ ।
ಪೆಚ್ಚು ಪೇಳುದದೇನು ನಿಮ್ಮವಳೆಂದ ಮೇಲವಳೆಮ್ಮವಳ್ ॥ ೧೭ ॥

ಕಾಮಂದಕಿ--ಬಾಲಾ, ಮಾಧವಾ.

ಮಾಧವ--ಏನಪ್ಪಣೆ ?

ಕಾಮಂದಕಿ--ಇವಳನ್ನು ಅಂಗೀಕರಿಸು.

ಮಾಧವ--ಸ್ವೀಕರಿಸುವೆನು.

ಕಾಮಂದಕಿ--ಬಾಲಾ ಮಾಧವಾ, ಮಗಳೇ ಮಾಲತೀ.

ಮಾಧವ--ಏನಾಜ್ಞೆ ?

ಮಾಲತಿ--ಅಪ್ಪಣೆಯನ್ನು ದಯಪಾಲಿಸಬೇಕು.

ಕಾಮಂದಕಿ--

॥ ಉತ್ಪಲಮಾಲಾ ॥

ಪೆಂಡಿರೆ ಪ್ರೀತಿಮಾಳ್ಪಕೆಳೆಯಂ ಬಳಗಂ ಸಿರಿ ಮಾನವರ್ಗೆ ಮೇಣ್ ।
ಖಂಡಿತಮೆಲ್ಲ ಕೋರಿಕೆಗಳಂ ತಣಿಸಲ್ ಪ್ರತಿಜೀವದಂತಿಹರ್ ।
ಗಂಡನು ಪೆಂಡರೊಳ್ ಸುಖವ ನೀಪರಿಯಿಂದಲೆ ನೀಡುತಿರ್ಪುದೈ ।
ಪಂಡಿತ ಬಾಲಬಾಲಿಕೆಯು ರೀತಿಯದನ್ನರಿಯುತ್ತ ಬಾಳ್ಪುದು ॥ ೧೮ ॥

ಮಕರಂದ— ಹೌದು.

ಲವಂಗಿಕೆ— ತಮ್ಮಪ್ಪಣೆಯಾದಂತೆ

ಕಾಮಂದಕಿ— ಮಗನೇ ಮಕರಂದನೇ ಇವೇ ಮಾಲತಿಯು ವಿವಾಹ ಉಡುಪುಗಳನ್ನು ತಕ್ಕೊಂಡು ನಿನ್ನ ಮಂಗಲಕಾರ್ಯವನ್ನು ಆರಂಭಮಾಡು

( ಹೀಗೆಂದು ತಬಕವನ್ನು ಅವನಿಗೆ ಕೊಡುತ್ತಾಳೆ.)

ಮಕರಂದ— ಅಪ್ಪಣೆ ಈ ಚಿತ್ರದ ತೆರೆಯ ಹಿಂದೆ ಹೋಗಿ ಈ ಉಡು ಗಳನ್ನು ಧರಿಸುವೆನು. ( ಅದರಂತೆ ಮಾಡುವೆನು )

ಮಾಧವ—ದೇವೀ ಈ ಉಪಾಯವು ಈಗ ಸುಲಭ ಕಂಡರೂ, ಇದರಿಂದ ಗೆಳಿಯನಿಗೆ ಕೇಡು ಒದಗಬಹುದು. ಮತ್ತು ಅವನು ಸಂಕಟದಲ್ಲಿ ಬೀಳಬಹುದು.

ಕಾಮಂದಕಿ— ಆ ಚಿಂತೆಯುಗೋಜು ನಿನಗೇಕೆ ?

ಮಾಧವ— ಅದು ತಮಗೇ ಗೊತ್ತು

ಮಕರಂದ— ( ಪ್ರವೇಶಮಾಡಿ ನಕ್ಕು )

( ಎಲ್ಲರೂ ಆಶ್ಚರ್ಯಪಟ್ಟು ಕುತೂಹಲದಿಂದ ನೋಡುವರು. )

ಮಾಧವ-- ( ಮಕರಂದನನ್ನು ಬಿಗಿಯಾಗಿ ಅಪ್ಪಿಕೊಂಡು ) ದೇವೀ,ನಂದನನು ಭಾಗ್ಯವಂತನೇ ಸರಿ. ಯಾಕಂದರೆ ನನ್ನ ಗೆಳಿಯನ ಈ ರೂಪವನ್ನು ನೋಡಿ ಕೆಲಕಾಲವಾದರೂ ಅವನು ಮನಮುಟ್ಟಿ ಪ್ರೀತಿಸುವನು.

ಕಾಮಂದಕಿ— ಮಕ್ಕಳೇ ಮಾಲತೀ ಮಾಧವರೇ, ಇಲ್ಲಿಂದ ಈ ಗಿಡಗಳ ಜಿಡುಪಿನೊಳಗಿಂದ ಹೋಗಿ ನಿಮ್ಮ ಮಂಗಲಕಾರ್ಯವನ್ನು ತೀರಿಸಿಕೊಳ್ಳಿರಿ. ಈ ಹೊಂಡದ ಆಚೆಯು ಬದಿಗೆ ನಮ್ಮ ತೋಟವಿರುವದು. ಅಲ್ಲಿ ಅವಲೋಕಿತೆಯು ನಿಮ್ಮ ಮಂಗಲಕಾರ್ಯಕ್ಕೆ ಬೇಕಾಗುವ ಎಲ್ಲ ದ್ರವ್ಯಗಳನ್ನು ಮೊದಲೇ ಸಿದ್ಧಪಡಿಸಿರುವಳು. ಮತ್ತೆ

॥ ಚಂಪಕಮಾಲೆ ॥

ಫಲಗಳ ಭಾರದಿಂದೆ ಮಣಿದಿರ್ದಡಕೀಗಿಡದಿಂದೆ ಮತ್ತೆಕೇ ।
ರಲರಮಣೀ ಕಪೋಲಮೆನೆ ವಿಸ್ತೃತವಾದೆಲೆ ಬಳ್ಳಿಯಿಂದಕ ।
ಕ್ಕೊಳ ಫಲತಿಂದು ಮೋದದೊಳು ಪಾಡುವ ಪಕ್ಷಿಗಳಿಂದೆ ತುಂಬಿದಾ ।
ಸ್ಥಳದೊಳು ನಿಮ್ಮ ಸೌಖ್ಯಕನು ಕೂಲತೆಯಾಗುವದೆಲ್ಲ ರೀತಿಯಿಂ ॥ ೧೯ ॥

ಇನ್ನು ಮೇಲೆ ಮದಯಂತಿಕೆಯೂ ಮಕರಂದನೂ ಬರುವವರೆಗೆ ನೀವು ಅಲ್ಲೇ ಇರತಕ್ಕದ್ದು.

ಮಾಧವ— ( ಆನಂದದಿಂದ ) ಈ ಆನಂದದ ಕಾರ್ಯಕ್ಕೆ ಅದೊಂದು ಕಳಸವಿಟ್ಟಂತಾಗುವದು.

ಕಲಹಂಸ-- ಇದೂ ಆದರ, ನಮಗ ಚಲೋನ ಆಗತತಿ.

ಕಾಮಂದಕಿ— ಇದರಲ್ಲಿ ಸಂದೇಹವೇನು ?

ಲವಂಗಿಕೆ— ಗೆಳತೀ ಕೇಳಿದಿಯಾ ?

ಕಾಮಂಪಕಿ— ಮಗನೇ ಮಕರಂದಾ, ಮಗಳೇ ಲವಂಗಿಕೆ ನಾವು ಇಲ್ಲಿಗೇ ನಿಲ್ಲುವ.

ಮಾಲತಿ— ಗೆಳತೀ ನೀನೂ ಪೋಗುವಿಯಾ ?

ಲವಂಗಿಕೆ-- ( ನಕ್ಕು )- ಗೆಳತೀ ಈಗ ನಾವು ಇತ್ತಕಡೆಗೆ ಸರಿದುಕೊಳ್ಳುವೆವು.

( ಕಾಮಂದಕಿಯೂ, ಲವಂಗಿಕೆಯೂ, ಮಕರಂದನೂ ಹೋಗುತ್ತಾರೆ.)

ಮಾಧವ-- ಈ ಸಮಯಕ್ಕೆ ನಾನು

॥ ತರಳಂ ॥

ಸರಿಸಿನಲ್ಲಿಯ ಕೆಂಪುತಾವರೆಯಾನೆ ಜಗ್ಗುವ ಮಾಳ್ಕೆಯಿಂ ।
ಭರದೊಳೊಯ್ಯುವೆ ಸ್ವೇದರೋಮಗಳಿಂದ ತುಂಬಿರುವಂಗುಲೀ ।
ಭರಿತಬಾಹುವಿನಿಂದಲೀಕೆಯ ಕಾಮಬಾಧಿತನಾದ ನಾ ।
ಜರಿತವಾಗಿರುವಂಗದೋಳ್ ತ್ವರೆಯಿಂದ ಶಾಂತೆಯ ನೀಡುವೇ ॥ ೨೦ ॥

( ಎಲ್ಲರೂ ಹೋಗುತ್ತಾರೆ. )

**ಆರನೆಯ ಅಂಕವು ಮುಗಿಯಿತು.**

# ಏಳನೆಯ ಅಂಕ.

( ಬುದ್ಧರಕ್ಷಿತೆಯು ಬರುತ್ತಾಳೆ. )

ಬುದ್ಧರಕ್ಷಿತೆ—ಆಹಹ, ಅಮಾತ್ಯ ಭೂರಿವಸುಗಳ ಮನೆಯಲ್ಲಿ ದೇವಿಯವರು ಮಾಡಿದ ಏರ್ಪಾಡಿನಿಂದ ಮಕರಂದನು ಕ್ಷೇಮದಿಂದ ಬಚ್ಚಲ್ಪಟ್ಟಿರುವನು. ಸರಿಯಾಗಿ ಧರಿಸಿದ ಮಾಲತಿಯ ಉಡಪುಗಳ ಶೋಭೆಯಿಂದ ನಂದನನನ್ನು ವಂಚಿಸಿ ಅವನ ಕೂಡ ವಿವಾಹ ಮಾಡಿಕೊಂಡನು. ಈಗ ನಾವು ನಂದನನ ಮನೆಗೆ ಬಂದಿರುವೆವು. ದೇವಿಯು ನಂದನನ ಅನುಮತಿಯಿಂದ ಇಲ್ಲಿಂದ ತನ್ನ ಬಿಡಾರಕ್ಕೆ ಹೊರಟು ಹೋದಳು. ಇಲ್ಲಿ ಹೊಸ ಸೊಸಿಯು ಮನೆಗೆ ಬರುವಳೆಂದು, ಹುಣ್ಣಿವೆ ಇಲ್ಲದಿದರೂ ಕೌಮುದಿಯ ದೊಡ್ಡ ಹಬ್ಬವನ್ನು ಮಾಡಿರುವರು. ಅದರಿಂದ ಎಲ್ಲ ಸೇವಕರು ರಾತ್ರಿಯಲ್ಲಿ ಎಚ್ಚರದಪ್ಪಿ ಮಲಗಿರುವರು. ಈ ಬೆಳಗು ಮುಂಜಾವಿನ ಕಾಲವು ನಮ್ಮ ಹಂಚಿಕೆಗೆ ಅನುಕೂಲವಾಗುವದು. ಕಾಮಾತುರನಾದ ಅಳಿಯನು ಕಾಲು ಬಿದ್ದು ಬೇಡಿಕೊಂಡರೂ ಸಹ ಮದಿಮಗಳು ವಶವಾಗಲಿಲ್ಲ. ಬಲಾತ್ಕಾರ ಮಾಡಬೇಕೆಂದು ಮೈಮೇಲೆ ಹೋಗಿ ಚನ್ನಾಗಿ ಬಡತಗಳನ್ನು ತಿಂದನು. ನಾಚಿಕಿಟ್ಟಿಗೆದ್ದು ಆವೇಶದಿಂದ ಕಣ್ಣೀರು ಸುರಿಸುತ್ತ, ತುಟಿಗಳನ್ನು ಕುಣಿಸುತ್ತ, ಬಾಯಿಂದ ಶಬ್ದಗಳು ಸ್ಪಷ್ಟ ಹೊರಡದಿದ್ದರೂ ಆಣೆ ಇಟ್ಟುಕೊಂಡು ಈ ಹದವಿರಾದ ಹೆಣ್ಣಿನ ಕೂಡ ನನ್ನದೇನೂ ಕೆಲಸವಿಲ್ಲವೆಂದು ಪ್ರತಿಜ್ಞೆಮಾಡಿ ಮನೆಬಿಟ್ಟು ಹೊರಟು ಹೋದನು. ಈ ಪ್ರಸಂಗದಲ್ಲಿ ಮದಯಂತಿಕೆಯನ್ನು ಕರೆತಂದು ಮಕರಂದನನ್ನೂ ಅವಳನ್ನೂ ಕೂಡಿಸುವೆನು.

( ಹೀಗೆಂದು ಹೋಗುತ್ತಾಳೆ )

**ಪ್ರವೇಶ ಮುಗಿಯಿತು.**

( ಹಾಸಿಗೆಯ ಮೇಲೆ ಮಲಗಿದ ಮಕರಂದನೂ ಲವಂಗಿಕೆಯೂ ಬರುತ್ತಾರೆ. )

ಮಕರಂದ—ದೇವಿಯು ಬುದ್ಧರಕ್ಷಿತೆಗೆ ಒಪ್ಪಿಸಿದ ಕಾರ್ಯವು ಕೊನೆಗಾಣಬಹುದೇ ?

ಲವಂಗಿಕೆ—ಮಹಾಶಯನೇ ಇದರಲ್ಲಿ ನಿನಗೆ ಸಂಶಯವೇಕೆ ಬರುತ್ತದೆ ? ಈ ಪೈಜಣದ ಸಪ್ಪಳದ ಮೇಲಿಂದ ನೋಡಿದರೆ ಆದೇ ಕೇಸದ ದೆಶೆಯಿಂದ ಬುದ್ಧರಕ್ಷಿತೆಯುಕೂಡ ಮದಯಂತಿಕೆಯು ಬಂದಂತೆ ತೋರುತ್ತದೆ. ಆದರಿಂದ ಮುಸುಕು ಹಾಕಿಕೊಂಡು ನಿದ್ರೆಹೋದವರಂತೆ ಮಲಗು.

( ಮಕರಂದನು ಹಾಗೆ ಮಾಡುತ್ತಾನೆ.)

( ಆ ಮೇಲೆ ಮದಯಂತಿಕೆಯೂ ಬುದ್ಧರಕ್ಷಿತೆಯೂ ಬರುತ್ತಾರೆ. )

ಮದಯಂತಿಕೆ—ಗೆಳತೀ ನಮ್ಮಣ್ಣನನ್ನು ನಿಜವಾಗಿ ಮಾಲತಿಯು ಬಹಳ ಸಿಟ್ಟಿಗೆಬ್ಬಿಸಿರುವಳು.

ಬುದ್ಧರಕ್ಷಿತೆ—ಹೌದು.

ಮದಯಂತಿಕೆ—ಛೀ, ಇದು ಬಲು ಕೆಡಕು. ಆ ಹಟಮಾರಿ ಮಾಲತಿಗೆ ಸಿಟ್ಟು ಮಾಡುವ ಬಾ.

( ಹೀಗೆಂದು ಮುಂದಕ್ಕೆ ಸಾಗುತ್ತಾರೆ. )

ಬುದ್ಧರಕ್ಷಿತೆ--ಇದೇ ಮಲಗುವ ಕೋಣೆ.

( ಇಬ್ಬರೂ ಒಳಗೆ ಹೋಗಿ )

ಮದಯಂತಿಕೆ—ಗೆಳತೀ ಲವಂಗಿಕೆ ನಿನ್ನ ಗೆಳತಿಗೆ ನಿದ್ರೆಹತ್ತಿದಂತೆ ತೋರುತ್ತದೆ.

ಲವಂಗಿಕೆ-ಗೆಳತೀ ಅವಳನ್ನು ಎಬ್ಬಿಸಬೇಡ. ಅವಳು ಇಷ್ಟೊತ್ತಿನ ವರೆಗೆ ಅತ್ತು ಅತ್ತು, ಈಗ ತುಸು ನಿದ್ರೆ ಹತ್ತಿದಂತೆ ತೋರುತ್ತದೆ. ಆದ್ದರಿಂದ ಮೆಲ್ಲನೆ ಇಲ್ಲಿ ಹಾಸಿಗೆಯ ಮೇಲೆ ಕೂಡ್ರು.

ಮದಯಂತಿಕೆ—( ಹಾಗೆ ಮಾಡಿ ) ಈ ಹಟಮಾರಿಯು ಏಕೆ ಅಳುವಳು.

ಲವಂಗಿಕೆ--ನಿಮ್ಮಣ್ಣನಂಥ ಹೊಸಕನ್ನಿಕೆಯರಲ್ಲಿ ವಿಶ್ವಾಸ ಹುಟ್ಟಿಸುವದರಲ್ಲಿ ಕುಶಲನೂ, ಸುಂದರನೂ, ಚತುರನೂ, ಸವಿಮಾತಿನವನೂ, ಸಿಟ್ಟಿಗೇಳದವನೂ ಆದ ಗಂಡನು ಸಿಕ್ಕ ಮೇಲೆ ಯಾಕೆ ನನ್ನ ಗೆಳತಿಯು ಅಳಲಿಕ್ಕಿಲ್ಲ ?

ಮದಯಂತಿಕೆ—ಬುದ್ಧರಕ್ಷಿತೇ, ನೋಡು, ತಿರಿಗಿ ನಮ್ಮ ಮೇಲೇ ಇವಳು ಗುರಿಕೀ ಹಾಕುವಳು.

ಬುದ್ಧರಕ್ಷಿತೆ— ತಿರುಗಿ ಆಗಲೀ ತಿರುಗದೇ ಆಗಲೀ.

ಮದಯಂತಿಕೆ— ಅದು ಹೇಗೆ ?

ಬುದ್ಧರಕ್ಷಿತೆ— ಕಾಲಿಗೆಬಿದ್ದ ಗಂಡನನ್ನು ಮನ್ನಿಸಲಿಲ್ಲವೆಂಬುವ ಮಾತಿನ ಮೇಲಿಂದ ನೋಡಿದರೆ ಅವಳು ನಾಚಿ ಹಾಗೆ ಮಾಡಿರಬಹುದು. ಅದಕ್ಕೆ ಅವಳ ಮೇಲೆ ನಾವು ದೋಷಹೊರಿಸಲಾರೆವು. ನನ್ನ ಜೀವದ ಗೆಳತೀ , ಹೊಸಕನ್ನಿಕೆಯರ ಕೂಡ ನಡಕೊಳ್ಳುವ ರೀತಿಯನ್ನು ಬಿಟ್ಟು , ಅವಸರ ಮಾಡಿ ಬುದ್ಧಿವಂತರ ರೀತಿಯನ್ನು ಬಿಟ್ಟದ್ದು ಮತ್ತು ಅಯೋಗ್ಯ ಮಾತುಗಳನ್ನಾಡಿದ್ದು ನಿಮ್ಮಣ್ಣನದು ಎಂಥ ತಪ್ಪು ! ನಾವೇ ತಪ್ಪುಮಾಡಿರುವೆಸಂದಮೇಲೆ ನಮಗೆ ಅವರು ಸಿಟ್ಟುಮಾಡುವದು ಸರಿಯೇ, ನಮ್ಮದೇ ತಪ್ಪಾಗಿರುವದು.

॥ ಕಂದ ॥

ತರುಣಿ ಮೊದಲೊಳು ಕುಸುಮದಂ ।
ತಿರುವಳು ಬಲು ಸೂಕ್ಷ್ಮರೀತಿಯಿಂ ನಡೆಯುವದೈ ॥
ತ್ವರೆಯಿಂ ನಂಬಿಗೆಯಿರದಿರೆ ।
ಕರೆದೆಳೆಯಲ್ ಸೇರಳಾಕೆ ರತಿಕೇಳಿಗೆ ತಾ ॥

ಎಂದು ಕಾಮಸೂತ್ರಕಾರರು ಹೇಳಿರುವರು.

ಲವಂಗಿಕೆ— ಮನೆಮನೆಗಳಲ್ಲೆಲ್ಲ , ಗಂಡಸರೂ ಮನೆತನಸ್ಥರ ಹೆಣ್ಣು ಮಕ್ಕಳೂ ಪ್ರಪಂಚಮಾಡುವದುಂಟು. ಆದರೆ ನಾಚಿಕೆಗೊಳಗಾದ ಮನೆತನಸ್ಥರ ಮಗಳು ಹೆಣ್ಣುಮಕ್ಕಳಿಗೆ , ಅವರ ಕಡೆಗೆ ಏನೂ ತಪ್ಪಿಲ್ಲದೆ ಕೈಯಲ್ಲಿ ಸಿಕ್ಕಿರುವರೆಂದು ಉರಿಯುವ ಬೆಂಕಿಯಂತಹ ಮಾತುಗಳನ್ನು ಯಾರೂ ಆಡುವದಿಲ್ಲ. ಈ ಮಾತುಗಳೆಂದರೆ ಎದೆಯಲ್ಲಿ ಬಾಣ ನೆಟ್ಟಂತೆ; ಇವು ಸಾಯುವವರೆಗೆ ನೆನಪುಳಿಯುವವು. ಇಂಥ ಅಪಮಾನವನ್ನು ತಾಳಿ ಹೆರವರ ಮನೆಯಲ್ಲಿರುವದೆಂದರೆ ಜೀವದಸುತ್ತು ಬರುತ್ತದೆ. ಇದರಿಂದಲೇ ಬಳಗದವರೆಲ್ಲ ಹೆಣ್ಣುಮಕ್ಕಳೆಂದರೆ ಬೇಡೆನ್ನುವರು.

ಮದಯಂತಿಕೆ— ಬುದ್ಧರಕ್ಷಿತೇ, ನಮ್ಮ ಜೀವದ ಗೆಳತಿಯಾದ ಲವಂಗಿಕೆಯ ಮುಖವು ಬಹಳೇ ಬಾಡಿರುವದು. ನಮ್ಮಣ್ಣನು ಏನೋ ಬಹಳ ಕೆಟ್ಟ ಮಾತುಗಳನ್ನಾಡಿದಂತೆ ತೋರುತ್ತದೆ.

ಬುದ್ಧರಕ್ಷಿತೆ—ಹೌದು. ನಾವೇ ಕೇಳಿದೆವಲ್ಲ. ಈ ಹದವಿಾರಿದ ಹೆಣ್ಣಿನಿಂದ ನನಗೆ ಪ್ರಯೋಜನವಿಲ್ಲೆಂದು, ಆಣೆ ಇಟ್ಟುಕೊಂಡು ಪ್ರತಿಜ್ಞೆಮಾಡಿ ಮಲಗುವ ಕೋಣೆಯಿಂದ ಹೊರಬಿದ್ದನಂತೆ.

ಮದಯಂತಿಕೆ—(ಕಿವಿಗಳನ್ನು ಮುಚ್ಚಿಕೊಂಡು) ಛೇ; ಏನು ಅಲ್ಲದ ಮಾತಿದು. ಇದು ಬಹಳ ತಪ್ಪಾಯಿತು. ಗೆಳತೀ, ನಿನ್ನ ಮೋರೆ ಸಹ ನೋಡಲಾರೆನು. ಆದರೂ ಧೈರ್ಯ ಮಾಡಿ ನಿನ್ನ ಕೂಡ ಮಾತಾಡುವೆನು.

ಲವಂಗಿಕೆ—ನಾನಂತೂ ನಿನ್ನ ಕೈಯೊಳಗಿನವಳೇ.

ಮದಯಂತಿಕೆ—ನಮ್ಮಣ್ಣನ ಕೆಟ್ಟ ನಡತೆಯೂ ಅಪಮಾನವೂ ಒತ್ತಟ್ಟಿಗಿರಲಿ. ಅವನು ಗಂಡನಾದ ಮೇಲೆ, ಎಂಥವನೇ ಇರಲಿ ಅವನ ಮನಸಿನ ವಲವಿನಂತೆ ನಡೆದುಕೊಳ್ಳತಕ್ಕದ್ದು. ಈ ಕೀಳ ಮಾತುಗಳನ್ನಾಡಲಿಕ್ಕೆ ಮೂಲ ಕಾರಣವೇನೆಂಬುವದು ನಿಮಗೆ ಗೊತ್ತಿಲ್ಲವೇ ?

ಲವಂಗಿಕೆ—ಇಲ್ಲದ ಮಾತುಗಳು ನಮಗೆ ಹೇಗೆ ಗೊತ್ತಾಗಬೇಕು ?

ಮದಯಂತಿಕೆ—ಆ ಶ್ರೇಷ್ಟನಾದ ಮಾಧವನಲ್ಲಿ ಮಾಲತಿಯು ಮನಸಿರುವದೆಂಬ ಮಾತು ಲೋಕಕ್ಕೆಲ್ಲ ಗೊತ್ತದೆ. ಇಷ್ಟರ ಮೇಲಿಂದ ತಿಳಕೋ. ಅದೇ ಮೂಲ ಕಾರಣವು. ಅವಳು ಗಂಡನ ಕಡಿಗೆ ತೋರಿಸುವ ದುರ್ಲಕ್ಷವು, ಬೇರು ಸಹ ಕಿತ್ತು ಹೋಗುವಂತೆ ಏನಾದರೂ ಹಂಚಿಕೆ ಮಾಡು. ಇಲ್ಲದಿದ್ದರೆ ಇದರ ಪರಿಣಾಮವು ಬಹಳ ಕೆಟ್ಟಾದೀತು. ಲಕ್ಷದಲ್ಲಿರಲಿ. ಮನೆತನಸ್ಥರ ಹೆಣ್ಣು ಮಕ್ಕಳು ಹೀಗೆ ಅನುಕೂಲರಾಗದೆ ರೀತಿಬಿಟ್ಟು ನಡಕೊಂಡರೆ ಇಂಥ ಕೆಟ್ಟ ನಡತೆಯಿಂದ ಗಂಡಸರ ಮನಸ್ಸು ಕೆಡುತ್ತದೆ. ಇದು ಗೊತ್ತಿರಲಿ. ಇದನ್ನೆಲ್ಲ ಮದಯಂತಿಕೆಯು ಹೇಳಿದಳೆಂದು ಹೇಳಬೇಡ.

ಲವಂಗಿಕೆ—ಏನೇ ಜನರ ಸುಳ್ಳೊಂದು ಸೊಟ್ಟೊಂದು ಮಾತಿಗೆ ಮರುಳಾಗುವವಳೇ ನಡೆ ಆಚೆಗೆ. ನಾನು ನಿನ್ನ ಕೂಡ ಮಾತಾಡುವದಿಲ್ಲ.

ಮದಯಂತಿಕೆ—ಗೆಳತೀ ತಡೆ. ನಿನಗೆ ಇನ್ನೂ ಎಲ್ಲ ಬಿಡಿದು ಹೇಳಿಲ್ಲೆಂದು ಹೀಗೆ ಮಾತಾಡುತ್ತೀ. ಕೇಳು. ನಿಜವಾಗಿ ಮಾಲತಿಯು ಜೀವವೆಲ್ಲ ಮಾಧವನಲ್ಲಿರುವದೆಂದು, ನಮಗೆ ಗೊತ್ತದೆ. ಮಾಲತಿಯ ಅವಯುವಗಳು ಕೇತಕಿಯ

ಒಳಭಾಗದಂತೆ ಬಿರುಸಾಗಿ ಶಕ್ತಿಯಿಲ್ಲದ್ದರಿಂದ ಚಂದಗೇಡಿಗಳಾಗಿವೆ. ಅವಳು ಮಾಧವನು ತನ್ನ ಕಯ್ಯಿಂದಲೇ ಹೆಣೆದ ಬಕುಲ ಹಾರವನ್ನು ಸಂಜೀವಿನಿಯಂತೆ ತನ್ನ ಕೊರಳಲ್ಲಿ ಹಾಕಿಕೊಂಡಿರುವ ಕಾರಣವೇನು? ಮಾಧವನಾದರೂ ಬೆಳಗಿನ ಚಂದ್ರನಂತೆ ನಿಸ್ತೇಜನಾಗಿ ಕೊರಗಿ ಬೆಳ್ಳಗಾದಕಾರಣವೇನು ? ಇದನ್ನೆಲ್ಲ ನೀವು ನೋಡಿಲ್ಲವೇ ? ಆ ದಿವಸ ಕುಸುಮಾಕರೋದ್ಯಾನದ ಹೊರಬದಿಯಲ್ಲಿ ಬೀದಿಗಳು ಕೂಡುವ ಸ್ಥಳದಲ್ಲಿ ಇವರಿಬ್ಬರು ಒಬ್ಬರನ್ನೊಬ್ಬರು ನೋಡಿದ್ದು ನಾನು ಕಂಡಿಲ್ಲವೇ ! ಅವರ ನೋಟಗಳು ಕಾಮನಿಂದ ಎಲ್ಲ ಉಪದೇಶಗಳನ್ನು ಕಲಿತವರಂತೆ ಶೃಂಗಾರದಿಂದ ಬಲು ಮನೋಹರವಾಗಿದ್ದವು. ಪರಿಚಾರಕರು ಕುತೂಹಲದಿಂದ ನೋಡುತ್ತಿದ್ದರು. ಇವರ ಪರಸ್ಪರ ದೃಷ್ಟಿಯು ಚಂಚಲವಾಗಿಯೂ ಚಾರುತರವಾಗಿಯೂ ತೋರುತ್ತಿತ್ತು. ಆಗ ನಮ್ಮಣ್ಣನಿಗೆ ಇವಳನ್ನು ಕೊಟ್ಟಸುದ್ದಿಯನ್ನು ಕೇಳಿದ ಕೊಡಲೇ ಇಬ್ಬರೂ ದೀರ್ಘಶ್ವಾಸಬಿಟ್ಟರು. ಇವರಿಗೆ ಕತ್ತಲು ಗವಿದಂತಾಗಿ ಮೋರೆಗಳು ಬಾಡಿದವು. ಮತ್ತು ಇವರು ಯದೆಯೊಡಕೊಂಡದ್ದು ನಾನು ನೋಡಲಿಲ್ಲವೇ ? ಮತ್ತೊಂದು ಹೆಚ್ಚಿನ ಮಾತು ಮರೆತೆನು.

ಲವಂಗಿಕೆ—ಇನ್ನು ಆ ಹೆಚ್ಚಿನ ಮಾತು ಯಾವದು ?

ಮದಯಂತಿಕೆ—ಏನಂದರೆ ನನಗೆ ಜೀವದಾನಕೊಟ್ಟ ಆ ಶೂರ ಪುರುಷನು ಎಚ್ಚರ ಹೊಂದಿದ ಸುದ್ದಿಯನ್ನು ಮಾಲತಿಯು ಮಾಧವನಿಗೆ ಹೇಳಿದಕೂಡಲೇ ದೇವಿಯು ಚತುರೋಕ್ತಿಗಳಿಂದ ಸೂಚನೆ ಮಾಡಿದಳು. ಅದಕ್ಕನುಸರಿಸಿ ಮಾಧವನು ತನ್ನ ಆತ್ಮವನ್ನೂ ಜೀವವನ್ನೂ ಮಾಲತಿಗೆ ಆ ಆನಂದದ ಸುದ್ಧಿಯನ್ನು ಹೇಳಿದ್ದಕ್ಕೆ ಪಾರಿತೋಷಕವೆಂದು ಅರ್ಪಿಸಿದನು. ಮತ್ತು ಲವಂಗಿಕೇ ನೀನೂ ನಿನ್ನ ಪ್ರೀತಿಯ ಗೆಳತಿಯೂ ಇದೇ ಪ್ರಸಾದವನ್ನು ಬಯಸುತ್ತಿದ್ದಿರೆಂದು ಹೇಳಿದಿ.

ಲವಂಗಿಕೆ—ಗೆಳತೀ, ಆ ಶೂರಪುರುಷನಾರು? ಅದು ನನಗೆ ಮರೆತಂತಾಗಿದೆ.

ಮದಯಂತಿಕೆ—ಗೆಳತೀ ನೆನಪು ಮಾಡಿಕೋ. ಆ ದಿವಸ ಆ ಕ್ರೂರ ಪಶುವಿನ ಹಾರಿಕೆಯಲ್ಲಿ ಯಾರೂ ದಿಕ್ಕಿಲ್ಲದೆ ನಾನು ಸಿಕ್ಕಾಗ್ಗೆ, ಅವನು ಸಮೀಪಕ್ಕೆ

ಬಂದು ತನ್ನ ದುಂಡನ್ನ ಕಂಬದಂಥ ತೋಳುಗಳಿಂದ ನನ್ನನ್ನು ಮುಟ್ಟಿ ಆದರಿಸಿದನು. ಏನೂ ಕಾರಣವಿಲ್ಲದಿದ್ದರೂ ನನ್ನ ಆಪ್ತನಂತೆ, ಇಡೀ ಲೋಕಕ್ಕೇ ಸಾರದಂತಿರುವ ತನ್ನ ದೇಹವನ್ನು ಆಹುತಿಕೊಡಲಿಕ್ಕೆ ಸಿದ್ಧನಾಗಿ ನನ್ನ ಜೀವವನ್ನುಳಿಸಿದನು. ಗಟ್ಟಿಯಾದ ಭೀತಿದಾಯಕ ದುಂಡನ್ನ ಎತ್ತರವಾದ ಅವನ ಎದೆಯ ಮೇಲಿನ ಜಪಮಾಲೆಯು ಹರಿದಿತ್ತು. ಆ ದುಷ್ಟ ಸ್ವಾಪದವೆಂಬ ಮಹಾರಾಕ್ಷಸನು ತನ್ನನ್ನು ಉಗುರುಗಳೆಂಬ ವಜ್ರದಿಂದ ಹೊಡೆಯುತ್ತಿರಲು ನನ್ನ ಮೇಲಿನ ಅಂತ:ಕರುಣದಿಂದ ಅದನ್ನು ಕೊಂದುಬಿಟ್ಟನು.

ಲವಂಗಿಕೆ—ಹುಂ ಮಕರಂದನೇನು ?

ಮದಯಂತಿಕೆ—( ಆನಂದದಿಂದ ) ಏನಂದಿ ?

ಲವಂಗಿಕೆ--ಮಕರಂದನೆಂದೆನೇ ( ನಗುತ್ತ ಅವಳ ಮುಖಮುಟ್ಟಿ )

ಇಂದ್ರವಜ್ರ ॥

ನಾವಂತು ಹೀಗಿರ್ಪೆವು ಪೇಳಿರೀಗಳ್ ।
ನೀವಿಂತು ರೋಮಂಗಳ ತೋರ್ಪ್ರದೇ-ಕಾ ।
ಭಾವಂಗಳೇಂ ಕನ್ಯಯರೋಳಿವಂ ಶೋ ।
ಭಾವಾಹಕಂ ಪೇಳಿಲೆ ಸತ್ಕುಲಸ್ತ್ರೀ ॥ ೧ ॥

ಮದಯಂತಿಕೆ--ಏಕೆ ನನಗೆ ನಗೆ ಮಾಡುವೆ? ಕೇಳು. ಆ ಸತ್ಪುರುಷನು ಯಮನ ಬಾಯೊಳಗಿಂದ ನನ್ನನ್ನೆಳೆದು ಬದಿಗೆ ಮಾಡಿದನು ಅವನ ಸುದ್ಧಿಯನ್ನು ಹೇಳಿದಕೂಡಲೇ, ಅವನ ಹೆಸರು ಉಚ್ಚರಿಸಿದಕೂಡಲೇ, ಅವನ ನೆನಪಾದಕೂಡಲೇ ಜೀವಕ್ಕೆ ಆನಂದವಾಗುತ್ತದೆ. ಆ ಪಶುವಿನ ಗಟ್ಟಿಯಾದ ಮತ್ತು ದೊಡ್ಡ ಉಗುರಿನ ಹೊಡತದಿಂದ ಅವನ ದೇಹವು ನಡುಗುತ್ತಿತ್ತು. ಮಯ್ಯಲ್ಲಿ ಬೆವರು ಸೋರುತ್ತಿತ್ತು. ಪ್ರೇಮದಿಂದ ಅವನ ಕರೆಕಮಲದಂತಹ ಕಣ್ಣುಗಳು ಅರಳಿದ್ದವು. ನೆಲದ ಮೇಲೆ ಬಿದ್ದ ಕತ್ತಿಯನ್ನೇ ಕೋಲಿನಂತೆ ಆಧಾರಮಾಡಿಕೊಂಡು, ಅದರ ಮೇಲೆ ತನ್ನ ದೇಹ ಭಾರವನ್ನಿಕ್ಕಿ ಧೈರ್ಯದಿಂದ ನಿಂತಿದ್ದನು. ಮದಯಂತಿಕೆಯ ದೆಸೆಯಿಂದ ತನ್ನ ಜೀವವನ್ನು ಗಂಡಾಂತರಕ್ಕೆ ಗುರಿಮಾಡಿದ ಆ ಮಹಾಪುರುಷನನ್ನು ನೀನು ಪ್ರತ್ಯಕ್ಷ ನೋಡಲಿಲ್ಲವೇ ? ( ಸ್ವೇದಾದಿ ವಿಕಾರಗಳನ್ನು ತೋರಿಸುವಳು. )

ಬುದ್ಧರಕ್ಷಿತೆ--( ಅವಳ ಮೈಮೇಲೆ ಕೈಯಾಡಿಸಿ ) ನಿನ್ನ ದೇಹದ ತಾಪವು ತಾನೇ ಮಾತಾಡುತ್ತದೆ. ಬೇರೆ ಮಾತಿನಿಂದ ಪ್ರಯೋಜನವೇನು? ನಿನ್ನ ದೇಹವು ಮಕರಂದನನ್ನು ಕೂಡಲಿಕ್ಕೆ ಹವಣಿಸುತ್ತಿದ್ದಂತೆ ತೋರುತ್ತದೆ.

ಮದಯಂತಿಕೆ--(ನಾಚಿ) ಸರಿ ಆಚೆಗೆ, ದೂರಾಗು. ಮಾಲತಿಯ ಗೆಳೆತನ ದಿಂದ ಹೀಗಾಯಿತು. ನನ್ನ ಗುಟ್ಟು ಹೊರಬಿತ್ತು.

ಲವಂಗಿಕೆ--ಗೆಳತೀ ಮದಯಂತಿಕೇ, ನಮಗೆ ತಿಳಿಯತಕ್ಕದ್ದೆಲ್ಲ ತಿಳಿದು ಹೋಗಿದೆ. ಇನ್ನು ಸುಮ್ಮನಾಗು, ಮುಚ್ಚುಮರೆ ಮಾಡುವದನ್ನು ಬಿಟ್ಟು ಬಿಡು. ಬಾ, ಇನ್ನು ವಿನೋದದಿಂದ ನಮ್ಮ ಗುಟ್ಟಿನ ಮಾತುಗಳನ್ನಾಡುತ್ತ ಕೂತು ಕೊಳ್ಳುವ.

ಬುದ್ಧರಕ್ಷಿತೆ--ಲವಂಗಿಕೆಯು ಒಳ್ಳೇ ಮಾತನ್ನೇ ಹೇಳಿದಳು.

ಮದಯಂತಿಕೆ--ನಾನಂತೂ ಗೆಳತಿಯರ ಕಯ್ಯಲ್ಲಿ ಸಿಕ್ಕಿರುವೆನು.

ಲವಂಗಿಕೆ--ಹಾಗಾದರೆ ನೀನು ಹೇಗೆ ಹೊತ್ತುಗಳಿಯುತ್ತೀ ನಮಗೆ ಹೇಳು.

ಮದಯಂತಿಕೆ--ಗೆಳತೀ ಕೇಳು. ಮೊದಲು ಬುದ್ಧರಕ್ಷಿತೆಯ ಮುಖಾಂತರ ಅವನ ಪರಿಚಯವು ನನಗಾಯಿತು. ಮೊದಲಿನಿಂದಲೇ ನನ್ನ ಮನಸ್ಸು ಅವನ ಲ್ಲಿಯೇ ಆನಂದ ಪಡಹತ್ತಿತು. ಮುಂದೆ ದೈವಗತಿಯಿಂದ ಅವನ ದರ್ಶನವಾ ಯಿತು. ಅಂದಿನಿಂದ ಅಸಾಧ್ಯವಾದ ಆಯಾಸದಿಂದಲೂ, ದುಃಖದಿಂದಲೂ, ಸಂತಾಪದಿಂದಲೂ ನನ್ನ ಮನಸ್ಸು ಸುಡಹತ್ತಿತು. ಜೀವದಾಶೆಯನ್ನು ಬಿಡ ಬೇಕಾಯಿತು. ಹೊಸದಾಗಿ ಬಲು ಹೆಚ್ಚಾದ ಈ ಕಾಮನ ಕಿಚ್ಚಿನಿಂದ ನಾನು ತಳಮಳಿಸುತ್ತಿರಲು ನನ್ನ ಗೆಳತಿಯರು ಸಹ ವ್ಯಸನಪಡಹತ್ತಿದರು. ಅವ ನಾಶೆಯನ್ನು ಬಿಡುವದರಿಂದ ಮರಣವು ಸುಲಭವಾಯಿತು. ಆದರೆ ಬುದ್ಧರಕ್ಷಿ ತೆಯ ಮಾತುಗಳು ಅದಕ್ಕೆ ಅಡ್ಡಬರಹತ್ತಿದವು. ಅದರಿಂದ ಮನಸ್ಸಿನ ಉತ್ಕಂಠ ತೆಯು ಹೆಚ್ಚಾಗಿ ಚಂಚಲಳಾಗಿ ಈ ಸಂಸಾರ ಚಕ್ರದಲ್ಲಿ ಸಿಲುಕಿರುವೆನು. ಅವ ನನ್ನು ಬಯಸಿ ಚಿಂತಿಸುತ್ತಿರುವಾಗ ಮನಸ್ಸಿನ ಉತ್ಕಟ ಇಚ್ಛೆಯಿಂದ ಮೋಹಿ ತಳಾಗಿ ಸ್ವಪ್ನಗಳಲ್ಲಿ ಅವನನ್ನು ಕಾಣುವೆನು. ಮತ್ತೆ ಗೆಳತೀ, ಒಂದು ಕ್ಷಣ ಹೊತ್ತು ಬೆರಗಾಗಿ ಮೈರೇಯ ಪಾನದ ಮದವೇರಿದವರಂತೆ ಕೆಂಪಾದತ

ಕಣ್ಣುಗಳನ್ನು ತಿರುವುತ್ತ ನನ್ನನ್ನು ದಿಟ್ಟಿಸಿ ನೋಡುವನು. ನನ್ನ ಕಿವಿಯಲ್ಲಿ ಬಂದು ಕುಶಲ ಮತ್ತು ಗಂಭೀರವಾದ ಸ್ವರದಿಂದ 'ನನ್ನ ಪ್ರೀತಿಯ ಮದಯಂತಿಕೇ' ಎಂದು ಕರೆಯುವನು. ಅವನ ಸ್ವರವು ಅರವಿಂದ ಹುಡಿಯ ಸತ್ವವನ್ನು ತಿಂದ ಕಲಹಂಸನಂತಿರುವದು. ನನ್ನೊಡೆಯನಂತೆ ನನ್ನನ್ನು ಶರಗು ಹಿಡಿದೆಳೆಯುವನು. ನಾನು ಬೆದರಲು, ನನ್ನೆದೆಯು ತುಳಿಕಿ ಹಾರುವಾಗ ನನ್ನನ್ನು ಪೀಡಿಸುವನು. ನಾನು ಅವನ ಕಮಲದ ದೇಂಟನಂಥ ತೋಳುಗಳ ಹಿಡತವನ್ನು ತಪ್ಪಿಸಿ ಮೊಲೆಗಳನ್ನು ಸರಿಸಿ ಬದಿಗೆ ಮಾಡುವಷ್ಟರಲ್ಲಿ ತರತರ ನಡುಗುವ ನನ್ನ ವಡ್ಯಾಣದ ಮೇಲೆ ತನ್ನ ವಿಶಾಲವಾದ ಎದೆಯನ್ನಿಟ್ಟು ನನ್ನನ್ನು ಸರಿದು ಹೋಗಗೊಡುವದಿಲ್ಲ. ಕ್ಷಣದಲ್ಲಿ ನನ್ನ ಸಿಟ್ಟು ಬೇಸರ ಮತ್ತು ದುಃಖಗಳನ್ನು ಹೋಗಲಾಡಿಸಿ ನನ್ನನ್ನು ಸಮಾಧಾನಗೊಳಿಸುವನು. ನಾನು ಮತ್ತೆ ಅವನನ್ನು ಪ್ರೇಮದಿಂದ ನೋಡುತ್ತಿರಲು, ನನ್ನನ್ನು ನೋಡಿ ನಕ್ಕು ನಾನು ಬೇಡೆಂದರೂ ಎರಡೂ ತೋಳುಗಳಿಂದ ಸರಿದಾಡದಂತೆ ನನ್ನನ್ನು ಕಟ್ಟುವನು. ಗೆಳತೀ , ಭಯಂಕರ ಸಿಂಹನ ಉಗುರುಗಳ ಹೊಡತವನ್ನು ತಾಳಿದ ತನ್ನ ಎತ್ತರವಾದ ಎದೆಯಲ್ಲಿ ನನ್ನನ್ನಿರಿಸುವನು. ನಾನು ಆವೇಶದಿಂದ ತಲೆಯನ್ನಲ್ಲಾಡಿಸಲು ಹೆಳಲು ಜಾರುವದು. ಕೂದಲುಗಳಲ್ಲಿ ತನ್ನ ಕಯ್ಯಿಕ್ಕಿ ನನ್ನ ನಿಶ್ಚಲವಾದ ಮುಖವನ್ನೂ ಅವಯವಗಳನ್ನೂ ಮೇಲಕ್ಕೆತ್ತುವನು. ತನ್ನ ಮನೋಹರವಾದ ಮುಖವನ್ನು ನನ್ನಲ್ಲಿಟ್ಟು ವಿನೋದಮಾಡುವನು. ನನ್ನ ಎಡಗಿವಿಯ ಹತ್ತರ ತನ್ನ ಹಾರುವ ಕೆಳದುಟಿಯನ್ನಿಟ್ಟು ಮನೋಹರವಾಗಿ ಏನೇನೋ ಮಾತಾಡುತ್ತ ನನ್ನ ಅಂಗಕ್ಕೆ ಶೋಭೆಯನ್ನೀವನು. ನನ್ನ ಮನಸ್ಸು ನಾಚಿಕೆ ಆನಂದಗಳಲ್ಲಿ ಎಚ್ಚರದಪ್ಪಿಸುತ್ತಿರುಗುತ್ತಿರಲು ಏನೇನೋ ಸರಿಬಾರದ ಧೈರ್ಯದ ಕೆಲಸಗಳಿಗೆ ನನ್ನನ್ನು ಕರೆಯುವನು. ನನ್ನ ಗೆಳತೀ, ಇದನ್ನೆಲ್ಲ ಪ್ರತ್ಯಕ್ಷ ಅನುಭವಿಸಿ ಒಮ್ಮಿಂದೊಮ್ಮೆ ಎಚ್ಚತ್ತ ಕೂಡಲೇ ದುರ್ದೈವಿಯಾದ ನನಗೆ ಈ ಲೋಕವೆಲ್ಲ ಹಾಳು ಅಡವಿಯಂತೆ ತೋರುವದು.

ಲವಂಗಿಕೆ—ಗೆಳತೀ, ಮದಯಂತಿಕೆ ಸ್ಪಷ್ಟ ಹೇಳು. ಆ ವೇಳೆಯಲ್ಲಿ ಸಂತೋಷದಿಂದ ಎಚ್ಚರದಪ್ಪಿ ಕೊಳ್ಳೆಂದು ನಕ್ಕು ನಿನ್ನ ಹಾಸಿಗೆಯನ್ನು ನೋಡಲು ನೀನು ಅದನ್ನು ಪರಿಚಾರಿಕೆಯರಿಗೆ ತೋರಿಸದೆ ಬಚ್ಚಿಡುವಿಯಲ್ಲವೇ? ಹೌದಲ್ಲೊ ?

ಮದಯಂತಿಕೆ— ಏನೇ, ಹುಚ್ಚರಂತೆ ಏನೇನೋ ನಗೆಮಾಡುವೆ ಹೋಗತ್ತಕಡಿಗೆ.

ಬುದ್ಧರಕ್ಷಿತೆ—ಗೆಳತೀ, ಮದಯಂತಿಕೆ, ಇವಳು ಮಾಲತಿಯು ಗೆಳತಿಯು ಅಂದಮೇಲೆ ಕೇಳುವದೇನು ? ಇಂಥ ಮಾತುಗಳು ಅವಳಿಗೆ ಆಗಲೇ ಗೊತ್ತಾಗುವವು.

ಮದಯಂತಿಕೆ—ಹೀಗೆ ಮಾಲತಿಗೆ ನಗೆ ಮಾಡಬೇಡ.

ಬುದ್ಧರಕ್ಷಿತೆ—ಗೆಳತೀ ಮದಯಂತಿಕೆ, ನೀನು ನನ್ನನ್ನು ನಂಬಿಗೆಗೇಡು ಮಾಡದಂತಿದ್ದರೆ ನಾನು ನಿನಗೆ ಒಂದು ಮಾತು ಕೇಳುವೆನು.

ಮದಯಂತಿಕೆ—ನಾನು ಎಂದಾದರೂ ನಿನ್ನನ್ನು ನಂಬಿಗೆಗೇಡು ಮಾಡಿ ತಪ್ಪುಗಾರ್ತಿಯಾಗಿರುವೆನೇ ? ಹೀಗೇಕೆ ಮಾತಾಡುವಿ ? ಈಗ ನೀನೂ ಲವಂಗಿಕೆಯೂ ನನ್ನ ಜೀವದ ಗುಟ್ಟು.

ಬುದ್ಧರಕ್ಷಿತೆ—ಈಗ ಮಕರಂದನು ಹೇಗೆ ಆಗಲಿ ನಿನ್ನ ದೃಷ್ಟಿಗೆ ಬಿದ್ದರೆ ನೀನು ಏನು ಮಾಡುವಿ?

ಮದಯಂತಿಕೆ—ಅವನ ಪ್ರತಿಯೊಂದು ಅವಯುವವನ್ನು ಬಹಳ ಹೊತ್ತಿನವರೆಗೆ ಮನಮುಟ್ಟಿ ಕಣ್ಣಿಕ್ಕಿ ನೋಡುವೆನು.

ಬುದ್ಧರಕ್ಷಿತೆ—ಈಗ ಅವನು ಕಾಮಾಂಧನಾಗಿ, ರುಕ್ಮಿಣಿಯನ್ನು ಪುರುಷೋತ್ತಮನು ಸ್ವಯಂವರ ಮಾಡಿಕೊಂಡಂತೆ, ಅವನಲ್ಲಿ ಕಾಮವನ್ನು ಹುಟ್ಟಿಸಿದ ನಿನ್ನನ್ನು ಆ ಪುರುಷಶ್ರೇಷ್ಠನು ಅಂಗೀಕರಿಸಿದರೆ ನಿನ್ನ ಮನಸ್ಸು ಏನನ್ನುವದು ?

ಮದಯಂತಿಕೆ— ಇಷ್ಟೊಂದು ಆಶೆಯನ್ನು ನನ್ನಲ್ಲಿ ಏನಾಧಾರದಿಂದ ಹುಟ್ಟಿಸುವೆ ?

ಬುದ್ಧರಕ್ಷಿತೆ—ಗೆಳತೀ ಹೇಳು.

ಲವಂಗಿಕೆ— ಗೆಳತೀ ಉಸುರ್ಗರೆದು, ತನ್ನ ಮನಸ್ಸಿನಲ್ಲಿರುವವನ್ನು ಅವಳು ಮೊದಲೇ ಸೂಚಿಸಿರುವಳು.

ಮದಯಂತಿಕೆ—ಈ ಶರೀರವನ್ನು ಅವನು ತನ್ನ ಜೀವವನ್ನು ಒತ್ತೀ

ಇಟ್ಟು ಬದುಕಿಸಿರುವನು. ಅಂದಮೇಲೆ ಈ ದೇಹವು ಅವನ ದಾಸಾನುದಾ[ಸ]ವಾಗಿರುವದು. ಇದರ ಮೇಲೆ ನನ್ನ ಒಡೆತನವೆಲ್ಲಿ ?

ಲವಂಗಿಕೆ--ನಿನ್ನ ದೊಡ್ಡಿಸ್ತನಕ್ಕೆ ಸರಿಯಾಗಿಯೇ ಮಾತಾಡಿದಿ.

ಬುದ್ಧರಕ್ಷಿತೆ—ಈ ಮಾತು ನೆನಪಿಡುವಿಯಾ ?

ಮದಯಂತಿಕೆ-- ಸಗಾರಿಯು ಹೊಡೆಯಿತು. ಎರಡನೆಯ ಜಾ[ಮ]ಮುಗಿದಂತಾಯಿತು. ಇನ್ನು ನಂದನನ ಕಡೆಗೆ ಹೋಗುವೆನು. ಅವನಿಗೆ ಸಿಟ್[ಟು]ಮಾಡಿ ಇಲ್ಲವೆ ಕಾಲುಬಿದ್ದಾದರೂ ಹೇಳಿ ಅವನನ್ನು ಮಾಲತಿಗೆ ಅನುಕೂಲನಾ[]ಗುವಂತೆ ಮಾಡುವೆನು. (ಹೀಗೆಂದು ಹೇಳಿ ಹೋಗುವಳು).

(ಮಕರಂದನು ನೋರೆ ಕೆರೆದು ಅವಳ ಕಯ್ ಹಿಡಿಯುವನು)

ಮದಯಂತಿಕೆ-- ಗೆಳತೀ ಮಾಲತೀ ಎದ್ದಿಯಾ ? ( ನೋಡಿ ಆನಂದದಿ[ಂ]ನಾಚುತ್ತ ) ಇದೇನು? ಬೇರೇ ಏನೋ ತೋರುತ್ತದೆ.

ಮಕರಂದ--

॥ ಚಂಪಕಮಾಲೆ ॥

ಬಡನಡು ತಾಳದೀಗ ನಡುಗುತ್ತಿಹ ಪೀನಸ್ತನಾಂತ್ಯ ಭಾರವಂ ।
ಬಿಡು ಭಯವನ್ನು ನಾಚಿಹೆಸು ಮಾನಸಭೋಗದಿ ನೀನೆ ಕಂಡ ನಿ ।
ನ್ನಡಿಗಳ ದಾಸನೆನ್ನೊಳಿಹ ನಿನ್ನಯ ಪ್ರೇಮಪ್ರಸಾದವನ್ನು ನೀ ।
ತಡೆಯದೆ ಹೇಳಿ ನನ್ನ ಮನದೊಳ್ ಮುದವೀರಿದೆ ಪ್ರೇಮ ಪಾತ್ರಳೇ ॥

ಬುದ್ಧರಕ್ಷಿತೆ--( ಮದಯಂತಿಕೆಯ ಮುಖವನ್ನು ಮೇಲಕ್ಕೆತ್ತಿ )

॥ ಚಂಪಕಮಾಲೆ ॥

ಮದನನ ಬಾಧೆಯನ್ನಿನಿತು ನಿನ್ನೊಳು ಪುಟ್ಟಿಸಿದಾತನೀತನೇ ।
ಸದನವು ಮಂತ್ರಿವರ್ಯರದು ಸರ್ವರು ನಿದ್ರೆಯೊಳಿರ್ಪರೀಗ ಮು ।
ತ್ತಿಮ ಕರಿಗತ್ತಿಸಿಕ್ಕಿರಿಕು ನೂಪುರನುಚ್ಚುತೆ ಸಪ್ಪಳಾಗದಂ ।
ದದಿಂದೆ ಪೊಕ್ಕುದೀಗ ಮರಿಸೀ ವರನಂನುಪಕಾರ ದೋರ್ವನಂ ॥ ೩ ॥

ಮದಯಂತಿಕೆ - ಗೆಳತಿ! ಬುದ್ಧರಕ್ಷಿತೆ ನಾವು ಎಲ್ಲಿ ಹೋಗತಕ್ಕದ[ು]

ಬುದ್ಧರಕ್ಷಿತೆ--ಮಾಲತಿಯು ಎಲ್ಲಿ ಹೋಗಿರುವಳೋ ಅಲ್ಲಿ.

ಮದಯಂತಿಕೆ--ಏನು, ಕಡೆಗೆ ಮಾಲತಿಯು ಧೈರ್ಯವಮಾಡಿದಳೇ ?

ಬುದ್ಧರಕ್ಷಿತೆ--ಹೌದು. ಮತ್ತು ನೀನಾದರೂ ' ಈ ಶರೀರದ ಮೇಲೆ ನನ್ನ ಒಡೆತನವೆಲ್ಲಿ ' ಎಂದು ಹೇಳಿರುವಿ.

(ಮದಯಂತಿಕೆಯು ಕಣ್ಣೀರು ಸುರಿಸುವಳು)

ಬುದ್ಧರಕ್ಷಿತೆ--ಭಾಗ್ಯಶಾಲಿಯೇ, ನನ್ನ ಪ್ರೀತಿಯ ಗೆಳತಿಯು, ತನ್ನ ಆತ್ಮವನ್ನು ತಾನಾಗಿಯೇ ನಿನಗೆ ಅರ್ಪಿಸಿರುವಳು.

ಮಕರಂದ--

॥ ಮಲ್ಲಿಕಾಮಾಲೆ ॥

ಇಂದು ನನ್ನಯ ಯೌವ್ವನಂ ಜಯಶಾಲೆಯಾಯಿತು ಕಾಂತೆ ತಾ ।
ಬಂದು ಕೂಡುತಲುತ್ಸವಂ ತಲೆದೋರಿತೆನ್ನೊಳಗಿಂದಿಗೆ ।
ಬಂಧುವಾದನು ಮಾರನೆನ್ನೊಳು ಸಾಧಿಸೆನ್ನಯ ಕಾರ್ಯವಂ ।
ಬಾಂಧವರ್ಗೆವನಿತ್ತ ಬೇಡಿದ ಸರ್ವಕಾಮಗಳಿಂದಿಗೆ ॥ ೪ ।

ಅಂದಮೇಲೆ ಈ ದಿಡ್ಡಿಯ ಬಾಗಿಲಿನಿಂದ ಹೊರಬೀಳೋಣ.

( ಗುಪ್ತವಾಗಿ ನಡೆಯುವರು )

ಮಕರಂದ--ರಾತ್ರಿಯಲ್ಲಿ ಯಾರೂ ಸಂಚಾರಮಾಡುವದಿಲ್ಲ. ಅದರಿಂದ ಈ ರಾಜಬೀದಿಯು ಎಷ್ಟು ಮನೋಹರವಾಗಿ ತೋರುತ್ತದೆ.

॥ ಚಂಪಕಮಾಲಾ ॥

ಅರಮನೆ ಗೋಡೆಯೊಳ್ ವಿಪುಲಗಂಧದ ಪೊಂದಿಗವಾಕ್ಷದಿಂದೆ ತಾ ।
ಹೊರಗಿಳಿಯುತ್ತೆ ಕರ್ಪುರದ ಸುವಾಸನೆಯಿಂದಲೆ ಕೂಡಿ ಲೀಲೆಯಿಂ ।
ಸುರೆಯೊಳಗಾಡಿ ವನಲತೆಯೊಳು ಕೂಡುತೆ ಪೂವಿನ ಗಂಧಬೀರುತಿ ।
ಮರುತನು ಪೇಳ್ವ ಸುಂದರಿಯರೊಳ್ ತರುಣರ್ ರಮಿಸುತ್ತಲಿರ್ಪುದಂ ॥೫॥

( ಎಲ್ಲರೂ ಹೋಗುತ್ತಾರೆ ).

ಏಳನೆಯ ಅಂಕವು ಮುಗಿಯಿತು.

# ಎಂಟನೆಯ ಅಂಕ.

( ಅವಲೋಕಿತೆಯು ಬರುತ್ತಾಳೆ ).

ಅವಲೋಕಿತೆ--ದೇವಿಯುವರು ನಂದನನ ಮನೆಯಿಂದ ಹೊರಟು ಕಂಡು ನಮಸ್ಕಾರಮಾಡಿ ಬಂದೆನು ಇನ್ನು ಮಾಲತೀಮಾಧವರಿದ್ದೆಡೆಗೆ ಹೋ ಗುವೆನು. ( ಮುಂದಕ್ಕೆ ಸಾಗಿ ) ಇಲ್ಲಿ ಅವರಿಬ್ಬರೂ ಬೇಸಿಗೆ ಕಾಲದ ಸಂಜೆ ಸ್ನಾನವನ್ನು ತೀರಿಸಿಕೊಂಡು ಸರೋವರದ ದಂಡೆಯಲ್ಲಿ ಕಲ್ಲುಹಾಸಿಗೆ ಮೇಲೆ ಕುಳಿತಿರುವರು ಅವರ ಸಮೀಪಕ್ಕೆ ಹೋಗುವೆನು.

( ಹೀಗೆಂದು ಹೋಗುತ್ತಾಳೆ ).

**ಇತಿ ಪ್ರವೇಶಕಂ,**

(ಮಾಲತೀಮಾಧವರು ಕುಳಿತಂತೆ, ಅವಲೋಕಿತೆಯು ಬದಿಗೆ ನಿಂತಂತೆ ಪ್ರವೇಶ ಮಾಡುವರು

ಮಾಧವ--( ಆನಂದದಿಂದ ) ಕಂದರ್ಪನ ಪ್ರಿಯದ ಮಿತ್ರನಾದ ರ ನಾಥನ ಯೌವನವು ಪೂರ್ಣತೆಯನ್ನು ಹೊಂದಿದೆ.

॥ ಮಾಲಿನಿ ॥

ತನಿಗದಿರನು ತಾಲೀವೃಕ್ಷ ಪತ್ರಂಗಳೊಳ್ ತಾ ।
ಬಿನದದಿ ಹರಿದಿರ್ಪಂ ದಟ್ಟಿ ಕಳ್ತಲ್‌ಗಳಂ ಮೇಣ್ ॥
ಮನಕೆ ಸುಖವ ಬೀರುತಿರ್ಪುದೀ ಕೇತಕೀಗಂ ।
ಧನುಗತಪವನಂ ಸುತ್ತೆಲ್ಲ ದಟ್ಟಾಗಿ ಬೀಸಿ ॥ ೧

( ತನ್ನಷ್ಟಕ್ಕೆ ) ಈ ಹಟವಾರಿ ಮಾಲತಿಯನ್ನು ಹೇಗೆ ಹಾದಿಗೆ ತರಬೇ ಒಳ್ಳೇದು ಹೀಗೆ ಹೇಳಿನೋಡುವ.

( ಕೇಳುವಂತೆ ) ಪ್ರಿಯೆ, ಮಾಲತಿ, ಇದೇ ಈಗ ನೀನು ಸಾಯುಂಕಾಲದ ಸ ವನ್ನು ಮಾಡಿ ತಣ್ಣಗಾಗಿರುವಿ. ನನ್ನ ಬೇಸಿಗೆಯ ತಾಪವನ್ನು ಕಳೆದುಕೊಳ್ಳ ನಿನ್ನನ್ನೊಂದು ಮಾತು ಕೇಳುವೆನು. ನನ್ನನ್ನು ಎರಡನೇಯುವನಂತೆ ಯ ತಿಳಿಯುತ್ತೀ ?

॥ ಚಂಪಕಮಾಲಾ ॥

ಹೇಲೊಳು ನೀರು ಸೋರುತಿದೆ ಮೈಯೊಳು ನಟ್ಟಗೆ ರೋಮನಿನ್ನೊಳಿ
ಗಳೆ ತಲೆನೋರುತಿರ್ದುದು ಕುಚಮಧ್ಯದೊಳೀಗಲೆ ತಣ್ಣಗಾಗಿರಲ್ ॥

ಲಲಿತೆಯೆ ಬೀರು ಮೋದವೆನಗೀಗಲೆ ಯೆಪ್ಪುತ ಪ್ರೇಮದಿಂದಲೀ ।
ಗಳಿಯುತ ತಾಪವೆನ್ನೊಳಿಹುದಂ ಮುದದಿಂದಲೆ ಶೋಭನಾಂಗಿಯೇ ॥ ೨ ॥

॥ ಮಾಲಿನಿ ॥

ತರುಣಿ ಕರವು ನಿನ್ನೊಳ್ ಲಜ್ಜೆಯಿಂ ಸ್ವೇದಿಸಿರ್ದೀ ।
ಗಿರಿಸದನಳಿಯಲ್ ತಾಪಂಗಳಂ ಕಂಠದೊಳ್ ಸುಂ ॥
ದರಹಿಮಕರನಂ ಕಂಡಾರ್ದ್ರಮಾಗಿರ್ದ ಕಲ್ಲಿಂ ।
ದರಿದೆನಿದನು ನೀ ಕೇಳ್ ಪ್ರಾಣವನ್ನೀಯೆ ನನ್ನೊಳ್ ॥ ೩ ॥

ಅದುದೂರೇ ಇರಲಿ, ನನ್ನಕೂಡ ಒಂದೆರಡು ಮಾತುಗಳನ್ನಾದರೂ ಆಡಿ ನನ್ನನ್ನು ಸಂತೋಷಗೊಳಿಸಬಾರದೇ

॥ ಚಂಪಕಮಾಲಾ ॥

ಬಿಗಿಯುತಲಪ್ಪಿ ಕಾಯವನು ಪೋಗಿಸಲೊಲ್ಲಿಯೆ ನನ್ನತಾಪವಂ ।
ಬಗಿಬಗಿ ಪೀಡೆಯಿತ್ತರೆನಗಿಂದುವುವಾತವು ಪಶ್ಚಿಮಾದ್ರಿಯಿಂ ॥
ಮೃಗಚಪಲಾಕ್ಷಿ ಮಾತುಗಳನಾಡುತಲೆನ್ನೊಳು ಮೋದಬೀರು ನೀ ।
ಬಿಗವಿನ ಹೆಂಣೆ ಕೋಗಿಲೆಯು ಕೂಜಿತದಿಂ ಬಲು ತಾಪಗೊಂಡೆ ನಾಂ ॥೪ ॥

ಅವಲೋಕಿತೆ— ಏಸೇ ಬಯಕೆಯನ್ನು ಕೊನೆಗಾಣಿಸದವಳೇ, ಮಾಧವನು ಹುಸು ಕಂಣುಮರೆಯಾದರೆ ಅವರು ಎಷ್ಟು ಹೊತ್ತು ಹೋದರೊ ಅವರನ್ನು ಇನ್ನು ಎಷ್ಟು ಹೊತ್ತಿಗೆ ಕಾಣುವೆನೊ, ಇನ್ನು ನನಗೆ ಬಹಳನಾಚಿಕೆ ಬಂದರೂ ಎವೆ ಇಕ್ಕದೆ ಅವರನ್ನು ನೋಡುವೆನು. ಮತ್ತು ಎರಡೂ ಕೈಯ್ಗಳಿಂದ ಬಿಗಿದಪ್ಪುವೆನೆನ್ನುತ್ತಿದ್ದಿ. ಈಗ ಅವರ ಪರಿಣಾಮು ಹೀಗೆ?

( ಮಾಲತಿಯು ಸಿಟ್ಟಿಗೆದ್ದವಳಂತೆ ಅವಳನ್ನು ನೋಡುವಳು )

ಮಾಧವ— ( ತನ್ನಷ್ಟಕ್ಕೆ ) ಪ್ರಿಯಿಯ ಪ್ರಿಯ ಶಿಷ್ಯಳು ತನ್ನ ಕುಶಲತೆಯಿಂದ ಇವಳ ಮನೋಹರವಾದ ಮಾತುಗಳನ್ನು ಸಹ ಎಲ್ಲಬದಿಯಿಂದ ತಿದ್ದಿರುವಳು.

— ( ಕೇಳುವಂತೆ ) ಅವಲೋಕಿತೆಯು ನಿಜವನ್ನೇ ಮಾತಾಡುವಳಲ್ಲವೇ ?

( ಮಾಲತಿಯು ತಲೆಯನ್ನು ಅಲ್ಲಾಡಿಸುವಳು )

ಮಾಧವ— ಹೇಳದಿದ್ದರೆ ನಿನಗೆ, ನನ್ನ, ಲವಂಗಿಕೆಯ, ಮತ್ತು ಅವಲೋಕಿತೆಯು, ಕೊರಳಾಣೆಯುದೆ.

ಮಾಲತಿ— ನನಗೇನೂ ಗೊತ್ತಿಲ್ಲ.

( ಅರ್ಧಮಾತಾಡಿ ನಾಚಿದಂತೆ ನಟಿಸುವಳು )

ಮಾಧವ— ಅರ್ಥವನ್ನು ಅಂಗೀಕರಿಸದೆ ಆಡಿದ ಮಾತುಗಳು ಎ
ಮನೋಹರವಾಗಿವೆ. ( ಒಮ್ಮೆಲೆ ನೋಡಿ ) ಅವಲೋಕಿತೇ ಇದೇನು.

|| ಮಲ್ಲಿಕಾಮಾಲೆ ||

ಸ್ವಚ್ಛಗಲ್ಲದಿ ಭಾಷ್ಪಧಾರೆಯು ಬೀಳುತಿರ್ಪುದ-ದೇತಕೀ ।
ಗಿಚ್ಛಿಸುತ್ತಿಹನೇನೆ ಚಂದ್ರನು ಕಾಂತಿಯುಂ ಮುಖಚಂದ್ರನಿಂ ॥
ನಿಚ್ಚಳಾಗಿ ಮಯೂಖವೆಂಬುವ ದೇಂಟಿನಿಂದೆಳೆಯುತ್ತಿಹಂ ।
ಹೆಚ್ಚಿನ ಮೃತವನ್ನು ಕಾಂತೆಯು ನೇತ್ರದಿಂದಲೆ ಪೋದದಿಂ ॥ ೫ ॥

ಅವಲೋಕಿತೆ— ಗೆಳತೀ, ಈಗ ಕಣ್ಣೀರು ಸುರಿಸುತ್ತ ಅಳುವ ಕಾ
ವೇನು ?

ಮಾಲತಿ— ಗೆಳತೀ, ಇಷ್ಟು ಹೊತ್ತಾದರೂ ಲವಂಗಿಕೆಯು ನನ್ನ
ಯಲ್ಲಿ ಇಲ್ಲೇ ಇಲ್ಲ. ಅವಳು ಎಲ್ಲಿರುವಳೆಂಬುವದು ಸಹಗೊತ್ತಿಲ್ಲ.

ಮಾಲತಿ— ಅವಲೋಕಿತೆ ಇದೇನು ? ನೀನು ಆಡಿದ ಮಾತುಗಳಿಂ
ಅವಂಗಿಕೆಯ ನೆನಪಾಗಿ ಅವಳೆಲ್ಲಿರುವಳೆಂದು ಚಿಂತಿಸುವಳು.

ಮಾಧವ— ನಾನು ಇದೇ ಈಗ ಕಲಹಂಸನನ್ನು ಕಳಿಸಿರುವೆನು. ಅ
ಯಾರಿಗೂ ಗೊತ್ತಾಗದಂತೆ ನಂದನನ ಮನೆಗೆ ಹೋಗಿ ಅಲ್ಲಿ ನಡೆದದ್ದ
ತಿಳಕೊಂಡು ಬರುವನು. ( ಕುತೂಹಲದಿಂದ ) ಅವಲೋಕಿತೇ, ಮದಯಂತಿ
ಕೆಲಸದಲ್ಲಿ ಬುದ್ಧರಕ್ಷಿತೆಯ ಪ್ರಯತ್ನವು ಸಫಲವಾಗಬಹುದೇ ?

ಅವಲೋಕಿತೆ— ಭಾಗ್ಯವಂತನೇ, ಮೊದಲು ಸಿಂಹನ ಹೊಡತ
ಎಚ್ಚರದಪ್ಪಿ, ಮತ್ತೆ ಮಕರಂದನು ಎಚ್ಚತ್ತದ್ದನ್ನು ಹೇಳುವಾಗ್ಗೆ ದೇವಿಯ
ಹೇಳಿಕೆಯಂತೆ ನೀನು ನಿನ್ನ ಜೀವನನ್ನೂ ಮನಸನ್ನೂ ಮಾಲತಿಗೆ ಅ
ಬಿಟ್ಟಿರುವೆ. ಈಗ ಮದಯಂತಿಕೆಯ ಲಾಭದ ಸುದ್ದಿಬರುವದು. ಅದನ್ನು
ವರಿಗೆ ಏನು ಬಹುಮಾನಕೊಡುವಿ.

ಮಾಧವ— ಕೇಳತಕ್ಕದ್ದನ್ನು ಕೇಳಿದಿ. ( ತನ್ನ ಎದೆಯ ಕಡೆಗೆನೋಡಿ )
ನೋದ್ಯಾನಕ್ಕೆ ಭೂಷಣವಾದ ಬಕುಳ ಗಿಡದ ಹೂವಿನ ಈ ಮಾಲ

ಮಾಲತಿಯೂ ಮತ್ತು ನಾನೂ ಒಬ್ಬರನ್ನೊಬ್ಬರು ಮೊದಲು ಕಂಡದ್ದಕ್ಕೆ ಸಾಕ್ಷಿಯಾಗಿರುವದು.

॥ ಚಂಪಕಮಾಲಾ ॥

ತರುಣಿಯು ನನ್ನ ಹಸ್ತದೊಳು ಪುಟ್ಟಿತಿದೆಂದರಿಯುತ್ತ ಪ್ರೀತಿಯಿಂ ।
ತರಿಸುತೆ ತನ್ನ ಮೈತ್ರಣಿಯರಿಂಸ್ತನ ಕುಟ್ಮಲದಲ್ಲಿ ನೀಡಿದಳ್ ॥
ಬರೆ ಕರದಾನ ಕಾಲಮುಳಿದಾಶಯಕಂಡು ಲವಂಗಿಯೆಂದು ನ ।
ನ್ನರಿಯುತ ಲರ್ಪಿಸಿರ್ಪಳಿದು ತನ್ನಯ ಜೀವಿತವೆಂದು ನನ್ನೊಳು ॥ ೬ ॥

ಅವಲೋಕಿತೆ— ಗೆಳತೀ, ಈ ಬಕುಲದ ಮಾಲೆಯು ನಿನ್ನ ಪ್ರೀತಿಯ ಒಡವೆಯು. ಇದು ಈಗ ಎರಡನೇಯವರ ಕೈಸೇರುವದು.

ಮಾಲತಿ— ಗೆಳತಿಯು, ಪ್ರಿಯಕರ ಉಪದೇಶವನ್ನೇ ಹೇಳುವಳು. ಎರಡೂ ನಿನೇ ಹೇಳು.

ಅವಲೋಕಿತೆ— ಕಾಲುಸಪ್ಪಳವಾಗುತ್ತದೆ.

ಮಾಧವ— ( ಪರದೆಯ ಕಡೆಗೆ ನೋಡಿ ) ಕಲಹಂಸ ಬಂದನಲ್ಲ.

ಮಾಲತಿ— ಮದಯಂತಿಕೆಯು ದೊರೆತಳಲ್ಲ.

ಮಾಧವ— ( ಆನಂದದಿಂದ ಅಲಿಂಗಿ ) ನಮಗೆ ಸಂತೋಷವಾಯಿತು. ( ಬಕುಲಹಾರವನ್ನು ಕೊರಳಲ್ಲಿ ಹಾಕುವನು )

ಅವಲೋಕಿತೆ-- ಬುದ್ಧರಕ್ಷಿತೆಯು ದೇವಿಯ ಮೇಲಿನ ಹೊರೆಯನ್ನು ಇಳಿಸಿದಳು.

ಮಾಲತಿ-- ( ಆನಂದದಿಂದ ) ನಾವಾದರೂ ಈಗ ಲವಂಗಿಕೆಯನ್ನು ಕಾಣುವೆವು.

( ಆ ಮೇಲೆ ಗಾಬರಿಯಾದ ಕಲಹಂಸನೂ, ಬುದ್ಧರಕ್ಷಿತೆಯೂ ಮದಯಂತಿಕೆಯೂ, ಲವಂಗಿಕೆಯೂ, ಬರುತ್ತಾರೆ. )

ಎಲ್ಲರು-- ದೊಡ್ಡಮನುಷ್ಯರೇ ನಮ್ಮನ್ನು ಕಾಯಬೇಕು. ಅರ್ಧ ಹಾದಿಯಲ್ಲಿ ಪುರದ ರಕ್ಷಕರು ಮಕರಂದನಿಗೆ ಎದುರಾದರು. ಆ ವೇಳೆಯಲ್ಲಿ ಬಂದ ಕಲಹಂಸನ ಕೂಡ ನಮ್ಮನ್ನು ಕಳಿಸಿಕೊಟ್ಟರು.

ಕಲಹಂಸ — ನಾ ಇಕಡೆಬರುವಾಗ ಮತ್ತು ಗಲಿಬಿಲಿ ಕೇಳಿತ. ಆವಾಗ

ಮತ್ತೆ ದಂಡುಬಂದು ಕೂಡಿಧಾಂಗ ಕಾಣತತಿ.

ಮಾಲತಿ ಮತ್ತು ಅವಲೋಕಿತೆ—ಅಯ್ಯೋ, ಆನಂದವೂ ಚಿಂತೆಯೂ ಒಮ್ಮೆಲೇ ಕೂಡಿಬಂದುವು.

ಮಾಧವ-- ತಂಗೀ ಮದಯಂತಿಕೇ, ನೀನು ಬಂದದ್ದು ಒಳಿತಾಯಿತು. ನೀನು ಬಂದು ನಮ್ಮ ಮನೆಯನ್ನು ಧನ್ಯಮಾಡಿದಿ. ನೀವು ಇಲ್ಲಿ ಅಂಜಿಕೆಯನ್ನು ಬಿಟ್ಟು ನಿಶ್ಚಿಂತೆಯಿಂದಿರ್ರಿ ನನ್ನ ಗೆಳೆಯನು ಒಬ್ಬನೇ ಬಹಳ ಮಂದಿಗೆ ಇದಿರಾಗಬೇಕಾಯಿತೆಂದು ಹಳಹಳಿಸುವ ಕಾರಣವಿಲ್ಲ.

॥ ಉತ್ಪಲಮಾಲಾ ॥

ಶೌರ್ಯದಿ ಕಾಡಿಯಾನೆಗಳ ಗಂಡವಶೀಳಲು ಮೇಲಕೇಳ್ವಕೆ ।
ಸ್ತ್ರೀಯರ್ವೆ ಗಂಟಿರಲ್ ಹರಿಗೆ ಕಾಣುತಲಾತನ ಕೂಡಲೀಲೆಯಿಂ ॥
ಧೈರ್ಯದಿಕಾದಿ ಯಾತನೊಳಗಿರ್ದೆಲುವಂ ಪುಡಿಮಾಡಿದಾತನೀ ।
ಶೌರ್ಯದ ಸಾಗರಂಗೆಳೆಯನನ್ಯರ ಬೆಂಬಲ ಬೇಡಲಾರನೂ ॥ ೭ ॥

ನಾನಾದರೂ ವಿಜಯಶ್ರೀಯ ಕೂಡ ಲೀಲೆಯನ್ನು ಮಾಡುವ ನನ್ನ ಗೆಳೆಯನಿಗೆ ನೆರವಾಗುವೆನು.

( ಹೀಗೆಂದು ಉದ್ವೇಗದಿಂದ ನಡೆದು ಕಲಹಂಸನ ಕೂಡ ಹೊರಟು ಹೋಗುತ್ತಾನೆ. )

ಅವಲೋಕಿತೆ ಮೊದಲಾದವರು--ಈ ಇಬ್ಬರೂ ಶೂರಪುರುಷರು ಏನೂ ತೊಂದರೆಯಿಲ್ಲದೆ ತಿರುಗಿ ಬರಬಹುದೇ ?

ಮಾಲತಿ—ಗೆಳತಿಯರೇ ಬುದ್ಧರಕ್ಷಿತೇ, ಅವಲೋಕಿತೇ, ಬೇಗ ಹೋಗಿ ದೇವಿಯವರಿಗೆ ಈ ಸಂಗತಿಯನ್ನು ಹೇಳಿರಿ. ಗೆಳತೀ, ಲವಂಗಿಕೇ ನೀನಾದರೂ ಅವರ ಕಡೆಗೆ ಹೋಗಿ ನಮ್ಮ ದೆಶೆಯಿಂದ ನಿಮಗೆ ಏನಾದರೂ ಕನಿಕರವಿದ್ದರೆ ಮೈಮರೆತು ಹೋರಾಡಬೇಡಿರೆಂದು ಹೇಳು.

( ಮಾಲತಿ ಮದಯಂತಿಕೆಯನ್ನು ಬಿಟ್ಟು ಉಳಿದವರೆಲ್ಲ ಹಾಗೇ ಆಗಲಿಯೆಂದು ಹೊರಟು ಹೋಗುತ್ತಾರೆ. )

ಮಾಲತಿ—ಅಯ್ಯೋ ಈ ಕಾಲಕ್ಕೆ ಹೇಗೆ ಹೊತ್ತುಕಳೆಯಬೇಕೆಂಬುವದು ತಿಳಿಯಲೊಲ್ಲದು. ನನ್ನ ಜೀವದ ಗೆಳತಿಯಾದ ಲವಂಗಿಕೆಯು ತಿರುಗಿ ಬರುವ ಹಾದೀ ನೋಡುತ್ತ ಕೂಡ್ರುವೆನು. ( ಶಿರುಗಾಡಿ ಸುಕಯದಿಂದ ) ನನ್ನ ಬಲಗಣ್ಣು ಹಾರುತ್ತದೆ. ಮತ್ತು ಯಡರನ್ನು ಸೂಚಿಸುತ್ತದೆ. ( ಕೂಡ್ರುವಳು )

( ಆ ವೇಳೆ ಕಪಾಲಕುಂಡಲೆಯು ಬರುತ್ತಾಳೆ. )

ಕಪಾಲಕುಂಡಲೆ—ಏ, ಪಾಪಿಯೇ ನಿಲ್ಲು.

ಮಾಲತಿ—( ಅಂಜಿ ) ಅಯ್ಯೋ ಪ್ರಾಣನಾಥನೇ ! (ಬಾಯಿ ಹೋದವಳಂತೆ ನಟಿಸುವಳು )

ಕಪಾಲಕುಂಡಲೆ—( ಸಿಟ್ಟಿನಿಂದ, ವಿಕಟ ಹಾಸ್ಯದಿಂದ ) ಒದರು, ಒದರು,

॥ಚಂಪಕಮಾಲ.॥

ತರುಣಿಯೆ ಪೇಳು ಸಾಧುಗಳ ಕೊಲ್ಲುತ ನಿನ್ನೊಳು ಸಂಗಮಾಡಿದಾ ।
ಪುರುಷನು ನಿನ್ನನೀಗಲುಳಿಸಲ್ ಬರುತಿರ್ಪನೆ ನಲ್ಲನೆಂದು ತಾ ॥
ತ್ವರಿತದೊಳೊಯ್ದು ಗುಬ್ಬಿಯನು ಬಾಯೊಳು ಹದ್ದುರಗಿರ್ಪುದೊಯ್ವವೋಲ್ ।
ಹರುಷದಿ ತುತ್ತು ಮಾಡುತಿಹೆ ನಿನ್ನನು ಬಾಲಿಕೆ ಕಾಣಲೊಲ್ಲದೇ ॥ ೮ ॥

ಇನ್ನು ಮೇಲೆ ಇವಳನ್ನು ಶ್ರೀ ಪರ್ವತಕ್ಕೆ ಒಯ್ದು ಹಬ್ಬಕ್ಕೊಮ್ಮೆ ಇವಳನ್ನು ಸಣ್ಣ ಸಣ್ಣ ಚೂರು ಮಾಡಿ ಒಳ್ಳೇ ದುಃಖಕೊಟ್ಟು ಕೊಲ್ಲುವೆನು.

( ಹೀಗೆಂದು ಮಾಲತಿಯನ್ನು ತಕ್ಕೊಂಡು ಹೋಗುತ್ತಾಳೆ )

ಮದಯಂತಿಕೆ—ನಾನಾದರೂ ಮಾಲತಿಯನ್ನೇ ಹುಡುಕುತ್ತಿರುವೆನು. ( ತುಸ ಮುಂದಕ್ಕೆ ಹೋಗಿ ) ಗೆಳತೀ, ಮಾಲತೀ.

ಲವಂಗಿಕೆ—( ಪ್ರವೇಶಮಾಡಿ ) ಗೆಳತೀ, ಮದಯಂತಿಕೇ ನಾನು ಲವಂಗಿಕೆಯು.

ಮದಯಂತಿಕೆ—ನೀನು ಮಾಧವರಾಯನನ್ನು ಕಂಡಿಯಾ.

ಲವಂಗಿಕೆ—ಇಲ್ಲ, ಇಲ್ಲ, ತೋಟದ ಭಾವಿಯ ಹಾದಿಯಿಂದಲೇ ಅವನು ಗೊಂದಲವನ್ನು ಕೇಳಿ ತನ್ನ ಭಯಂಕರವಾದ ಎದೆಯನ್ನು ಭುಜಗಳನ್ನು ಚಪ್ಪರಿಸುತ್ತ ಓಡುತ್ತ ಹೋಗಿ ವೈರಿಗಳ ದಂಡನ್ನು ಹೊಕ್ಕನು. ದುರ್ದೈವಿಯಾದ ನಾನು ಅಲ್ಲಿಂದ ಹಾಗೇ ತಿರುಗಿ ಬಂದೆನು. ಊರ ಜನರು ಮನೆಗಳಲ್ಲೆಲ್ಲ ಇವರ ಗುಣಗಳನ್ನು ಹೊಗಳುತ್ತಿರುವರು. ಮಾಧವನು ಎಂಥ ಪರೋಪಕಾರಿಯೆಂದೂ, ಮಕರಂದನು ಎಂಥ ಧೈರ್ಯಶಾಲಿಯೆಂದೂ, ಕೊಂಡಾಡುತ್ತಿರುವರು. ಮಹಾರಾಜರು ಮಂತ್ರಿಯ ಮಗಳ ವಂಚನೆಯನ್ನು ಕೇಳಿ ರೊಚ್ಚಿಗೆದ್ದು ಕೂಡಲೇ ಎಷ್ಟೋ ಕಾಲಾಳುಗಳನ್ನು ಕಳಿಸಿ ಅರಮನೆಯ ಮೇಲುಪ್ಪರಿಗೆಯಿಂದ ಬೆಳದಿಂಗಳಲ್ಲಿ ನಿಂತು ನೋಡುತ್ತಿರುವರಂತೆ.

ಮದಯಂತಿಕೆ—ಅಯ್ಯೋ, ದುರ್ದೈವವೇ, ಸತ್ತೆನು.

ಲವಂಗಿಕೆ – ಗೆಳತೀ ಮಾಲತೀ

ಮದಯಂತಿಕೆ––ಗೆಳತೀ. ಅವಳು ನಿನ್ನ ಹಾದೀ ನೋಡುವ ದೆಶೆಯಿಂದ ಮೊದಲೇ ಹೋಗಿರುವಳು. ಆ ಮೇಲೆ ಅವಳನ್ನು ನೋಡಿಲ್ಲ. ಅವಳು ಈ ತೋಟದ ಗಿಡಗಳ ಜುಡುಪಿನಲ್ಲಿ ಎಲ್ಲಿಯಾದರೂ ಇರಬಹುದು.

ಲವಂಗಿಕೆ – ಗೆಳತೀ, ಬೇಗ ಹುಡುಕುವ ನಡೆ. ನನ್ನ ಗೆಳತಿಯು ಬಲು ಅಂಜುಬುರಿಕೆ. ಇಷ್ಟೊತ್ತಿನವರೆಗೆ ತೋಟದಲ್ಲೇ ಇದ್ದು ಅವಳು ಜೀವ ಹಿಡಿಯುವದು ಸಹ ಕಷ್ಟ.

ಲವಂಗಿಕೆಯೂ ಮದಯಂತಿಕೆಯೂ––(ಇತ್ತಿಂದತ್ತ ಗಡಿಬಿಡಿಯಿಂದ ಓಡಾಡಿ) ಗೆಳತೀ ಮಾಲತೀ, ಏನೇ ಮಾಲತೀ, ಎಲ್ಲಿರುವಿಯೋ ಮಾಲತಿ (ಹೀಗೆ ಇತ್ತಿಂದತ್ತ ಓಡ್ಯಾಡುವರು)

ಕಲಹಂಸ—( ಆನಂದದಿಂದ ಪ್ರವೇಶಮಾಡಿ ) ನನ್ನ ನಸೀಬ ಗಟ್ಟಿತ್ತಂತ ಆ ಹೊಡದಾಟದಾಗಿಂದ ಏನಿಲ್ಲದ ಪಾರಾದ್ನಿ. ಅಬ್ಬಬ್ಬಾ ! ನನ್ನ ಕಣ್ಣ ಮುಂದೆ ಅದೆಲ್ಲ ಕಟ್ಟಿದಾಂಗಾಗೈತಿ. ಚಂದಪ್ಪನ ಬೆಳಕಿನಾಗ ಕತ್ತಿಗೊಳ ಸಾಲಿಗೆ ಸಾಲದಟ್ಟಾಗಿ ಲಕಲಕಾ ಹೊಳುತಿದ್ದವು. ನೆನಪಾದರ ಇನ್ನೂ ಅಂಜಿಕ ಬರತತಿ ಬಲರಾಮಣ್ಣ ಆಡಾಡತ ಎರ್ಡೂ ಕೈಲೆ ನೇಗಿಲಾ ನೆಗವಿ ಕರಿಹೊಳ್ಯಾಗ ಹೊಡತಾಹೊಡದರ ನೀರು ಹ್ಯಾಂಗ ನಡಗತತಿ ಹಾಂಗ ದಂಡ ನಡಗತಿತ್ತ. ಮಕರಂದಣ್ಣಾ ಹರಾಹುರಿಗೆದ್ದ ಜಿಗ ಜಿಗದ ಹುರಪಿಲೆ ಅಸಿಮಿಸಿಲ್ಲದ ಹೊಡತಾಹೊಢ್ಯಾಣಾ ದಂಡೆಲ್ಲ ಲಡಾಯಿ ಮಾಡೂದ ಬಿಟ್ಟ ಓಡಾಕ ಹತ್ತೂತಲೆ ಮುಗಲ ಸುದ್ದಾ ಗದಗಮಿಸಿ ಹೋತು. ವೈರಿಗೋಳ ದಂಡ ಇನ್ನು ಕಣ್ಣಮುಂದ ಕಟ್ಟಿಧಾಂಗಾಗೈತಿ. ಮಾಧುರಾಯರ ಭುಜಾ ನೋಡಾಣಾ ಅಂಜಿಕಿ ಬರಬೇಕ ನಾ, ಸೀ, ಅಂತ ಲಡಾಯಿ ಮಾಡೂ ಮಂದೆಲ್ಲ, ನಮ್ಮ ರಾಯರ ಹೊಡತಕ ಚಲ್ಲಾಪಿಲ್ಲ್ಯಾಗಿ ರಣಾಬಿಟ್ಟು ಓಡಾಕಹತ್ತಿತ- ಅವರ ಕೈಯೊಳಗಿನ ಕತ್ತಿಗೋಳ ಕಸಕೊಂಡ ಮುಕ್ಕಟ್ಟ ಕಟ್ಟ ಅವರ್ನ ಹೊಡ್ಯಾಕ ಹತ್ತಾಣಾ ಬಟಾಬೈಲ ಆದ್ರ. ಆಯಾಳೇಕ ಅವ ಮಾಡಿದ ಸೂರತನ ಇನ್ನು ಕಣ್ಣಮುಂದ ಇದ್ದಾಂಗಾಗೈತಿ. ಬುರಜಿನ ಮ್ಯಾಲಿಂದ ಆಳಗೋಳ ಇಳಿದಬಂದ ಅರಸರಿಗಿ ಎಲ್ಲಾ ಸುದ್ದಿ ಹೇಳಾಣಾ ಅವನ ಸಿಟ್ಟು ಇಳೀತ. ಮಾಮೂರಾಯರನೂ ಮತ್ತೂ ಮಕರಂದ

ಣ್ಣಿಂದೂ ಚಂದ್ರಾಮನಂತಾ ಮಾರಿಗೋಳ ನೋಡಿವರ ಎಷ್ಟ ಸಮಾಧಾನ ಕಾಣತಿತ್ರ. ಅರಸರ ಎಟ್ಟ ಪಿರಿತೀಲೆ ಅವರನ ಮ್ಯಾಲಿಂದ ಮ್ಯಾಲ ನೋಡತಿದ್ದ ಕಲಹಂಸನ ಬಾಯಲೆ ಅವರ ಹಿತಾರ ಪಿತಾರ ಎಲ್ಲಾ ಕೇಳಿಕೊಂಡ ಹಿರೇರಿಗೆಲ್ಲಾ ಉಡುಪುಗೋಳ ಕಳಿಸಿದ ಬೂರೀವಸು ಮಂತ್ರಿಗೋಳೂ, ನಂದನರಾಯರೂ, ಶಿಟ್ಟಿಗೆದ್ದ ಈರ್ಸಲೆ ಮುಸಾಡತಿದ್ದರ ಅವರ ಮಾರಿಗೋಳ ಕಪ್ರಗ ಹಂಚ ಬಡದ ಹೋಗಿದ್ದಾವ. ಅರಸ ಹೆಂತಾ ಸವಿನೂತಿಲೆ ಹೇಳಿವ ಈ ನಿಮ್ಮ ಅಳ್ಯಾರೂ ಭೂಮಂಡಲಕ ಒಂದು ವಸ್ತ ಇದ್ದಾಂಗ, ಅವರ ಚಲೋವುಸಿತನದವರ. ಹರೇದ ಹುಡುಗೋರು. ಎಲ್ಲಾ ಗುಣದಿಂದ ಸಂಪನ್ನರದಾರು ಅವರಿಗಿನ್ನೇನ ಮರೇದಿ ಕೊಡಬೇಕು? ಅಂತ ಕೇಳಿ ಅರಸ ವಳಗಹೋದ. ಮಾಧವರಾಯರೂ, ಮಕರಂದಣ್ಣನೂ, ಬರಾಕತ್ತೀದಾಗ ನಾನು ದೇವಿಗೋಳ ಕಡೆ ಹೋಗಿ ಇದನ್ನೆಲ್ಲಾ ಹೇಳತೇನ. ( ಆಸೇಲೆ ಮಕರಂದರು ಬರುತ್ತಾರೆ. )

ಮಾಧವ--ಅಹಹ, ನನ್ನ ಗೆಳೆಯನು ಎಲ್ಲರಿಗೂ ಹೆಚ್ಚಿನವನು. ಅವನ ಶೌರ್ಯದ ಸಹಜವಾದ ಬೆಳಕು ಎಷ್ಟೆಂದು ಹೇಳಲಿ. ಯಾಕಂದರೆ

[ ಚಂಪಕಮಾಲಾ ]

ತುಳುಕುತಲಿರ್ದ ಕಾಲದಳ ಸಂದಣಿಕಿತ್ತುರ್ಗರಣಾಂಗಣಾಂಬುಧೀ ।
ಸ್ಥಳದೊಳು ತುಂಬಿ ಹಾರಿದವು ರುಂಡಗಳಾಗಲೆ ದಟ್ಟಮಾಗಿತೋ ।।
ಳ್ಗಳಬಲದಿಂದೆ ನೀಸರಿಸಿ ದಂಡನುಬೀಳ್ಗೆಡವಿರ್ದಶೂರರಂ
ಗೆಳೆಯನೆ ವೀರರಂಸೆದೆದು ಕೈದುಗಳಂ ಶಳೆಯುತ್ತೆ ಪೊಯ್ದಿನೀ ।। ೯ ।।

ಗೆಳೆಯನೇ ಇದನ್ನು ನೋಡಿ ಮನಸಿಗೆ ಬಹಳ ಕೆಡಕೆನಿಸುತ್ತದೆ.

[ ಶಾರ್ದೂಲವಿಕ್ರೀಡಿತವೃ ]

ಇಂದೇ ರಾತ್ರಿಯೊಳಪ್ಪಿ ಕಾಂತೆಯುರಸೀವೀರರ್ ಸುರಾಪಾನದೋ ।
ಳಿಂದೇಚಂದ್ರನ ಬಿಂಬಯುಕ್ತ ಸುರೆಯುಂ ಸ್ತ್ರೀಶಿಷ್ಟವಂ ಸ್ವಾದಿಸಿ ।
ರ್ಗಿಂದೇ ನಿನ್ನ ವಿಶಾಲ ಬಾಹುವವರಂ ಕೊಂದಿರ್ಪುದೀ ಜೀವಿಗಳ್ ।
ಇಂದೇಬಿದ್ದಿಹರಿಲ್ಲಿ ಭಂಗುರತೆಯುಂ ಸಂಸಾರದೋಳ್ ತೋರಿಸಲ್ ।। ೧।।

ಅರಸನು ಎಂಥ ಒಳ್ಳೆಯವನು ನೋಡಿದಿಯಾ. ನಾವು ತಪ್ಪುಮಾಡಿದಾಗ್ಯೂ ತಪ್ಪುಮಾಡದವರಂತೆ ನಮ್ಮ ಸಮೀಪಕ್ಕೆಬಂದು ನಮ್ಮಕೂಡ ನಗೆಯಾಡಿದನು. ಇನ್ನು ನಡಿ ಮಾಲತಿಯ ಎದುರಿನಲ್ಲಿಯೇ ಮದಯಂತಿಕೆಯನ್ನು ದೊರಕಿಸಿದ

ಕಥೆಯನ್ನು ವಿಸ್ತಾರವಾಗಿ ಕೇಳೋಣ (ಮುಂದಕ್ಕೆಹೋಗಿ) ಇದೇನು ಇಲ್ಲಿ ಯಾರೂ ಇಲ್ಲ.

ಮಕರಂದ— ನಾವು ರಣದಲ್ಲಿದ್ದದ್ದಕ್ಕೆ ಚಿಂತೆಗೊಂಡು ಮರೆಮಾತಿಗೆ ಹಾಕುವದಕ್ಕಾಗಿ ಇಲ್ಲೆ ಎಲ್ಲಿಯಾದರೂ ಅಡ್ಡಾಡುತ್ತಿರಬಹುದು.

ಮಾಧವ—

॥ ಉತ್ಪಲಮಾಲಾ ॥

ನೀಕಥೆಯನ್ನು ಪೇಳ್ವಸಮಯಕ್ಕೆನತಂ ಮದಯಂತಿಕಾಮುಖಂ ।
ಆಕುಲ ಪ್ರೀತಿಯಿಂ ವಲಿತಲೋಲಕಟಾಕ್ಷದಿ ನೋಡೆ ಮಾಲತೀ ॥
ತಾ ಕಳೆಯೊಂದಿ ಲಜ್ಜೆಯೊಳು ಫುಲ್ಲಿತಪಂಕಜದಂತೆ ತೋರ್ಪುದೂ ।
ಸಂಕುಲ ಪ್ರೇಮದಿಂದವರು ನಮ್ಮೊಳು ನೋಡುವರಂದು ಸಸ್ಮಿತಂ ॥ ೧೧ ॥

( ಪ್ರವೇಶ ಮಾಡಿದಂತೆ ನಟಿಸಿ )

ಲವಂಗಿಕೆಯೂ ಮದಯಂತಿಕೆಯೂ— ಗೆಳತೀ ಮಾಲತೀ (ಒಮ್ಮೆಲೆನೋಡಿ ಆನಂದದಿಂದ) ಆ ಇಬ್ಬರೂ ಶೂರಪುರುಷರನ್ನು ಮತ್ತೆ ನಾವು ಸುದೈವದಿಂದ ಕಂಡೆವಲ್ಲ?

ಮಾಧವ ಮಕರಂದರು— ನೀವಿಬ್ಬರಾದಿರಿ ಮಾಲತಿ ಎಲ್ಲಿರುವಳು.

ಇಬ್ಬರೂ— ಎಲ್ಲಿಯ ಮಾಲತಿ ನಾವು ಕಾಲುಸಪ್ಪಳದಿಂದ ಮೋಸ ಹೋದೆವು.

ಮಾಧವ— ತಂಗಿಗಳಿರಾ, ನನ್ನ ಮನಸಿನಲ್ಲಿ ಏನೇನೋ ಕಲ್ಪನೆಗಳು ಬಂದು ಸಾವಿರಕಡೆಯಿಂದ ನನಗೆ ಅಂಜಿಕೆ ಬರಹತ್ತಿದೆ. ಅದರಿಂದ ಸ್ಪಷ್ಟವಾಗಿ ಹೇಳಿರಿ.

॥ ಚಂಪಕಮಾಲಾ ॥

ತರುಣಿಗೆ ಕಷ್ಟವಂ ಮನವು ಶಂಕಿಸುತಿರ್ಪುದು ಸರ್ವಕಾಲದೋಳ್ ।
ಕರುಣದಿ ಕಂಪಿಸುತ್ತಿರುವದಾತ್ಮವು ನನ್ನೊಳು ಭೀತಿಯಿಂದೆ ತಾ ।
ಸ್ಫುರಣವು ವಾಮನೇತ್ರದೊಳು ತೋರುವದೆನ್ನೊಳಗೇನು ಮಾಡಲೀ ।
ತೆರದೊಳು ನೀವು ಪೇಳುವಿರಿ ಘಾತವೆಯಾಯಿತು ನನ್ನದಿಂದಿಗೆ ॥ ೧೨ ॥

ಮದಯಂತಿಕೆ— ತಾವು ಆ ರೀತಿ ಹೊರಟು ಹೋದಮೇಲೆ ಬುದ್ಧರಕ್ಷಿತೆಯನ್ನೂ, ಅವಲೋಕಿತೆಯನ್ನೂ, ದೇವಿಯುವರ ಕಡೆಗೆ ಕಳಿಸಿತು. ಮೈಮರೆತು ಹೋರಾಡಬಾರದೆಂದು ಹೇಳುವದೆಶೆಯಿಂದ ಲವಂಗಿಕೆಯನ್ನು ತಮ್ಮಕಡೆಗೆ

ಕಳಿಸಿತು. ಹಳಹಳಿಸುತ್ತ, ಅವಳ ಹಾದೀನೋಡುತ್ತ ಮಾಲತಿಯು ಮುಂದಕ್ಕೆ ನಡೆದಳು. ಹಿಂದಿನಿಂದ ನಾನಿದ್ದೆನು ಆಮೇಲೆ ಆಕೆಯನ್ನು ಕಾಣಲಿಲ್ಲ ನಾವು ಆಕೆಯನ್ನು ಗಿಡಗಳ ಜುಡುಪಿನಲ್ಲಿ ಹುಡುಕುತ್ತಿದ್ದೆವು ಅಷ್ಟರಲ್ಲಿ ನೀವು ಬಂದಿರಿ.

ಮಾಧವ— ಅಯ್ಯೋ ಪ್ರಾಣಪ್ರೀಯೇ ಮಾಲತೀ ?

॥ ಮಂದಾಕ್ರಾಂತ ವೃತ್ತ ॥

ಏನೇನೋ ಸಂಶಯಮನದೊಳೆನ್ನಲ್ಲಿ ಬಂದಿರ್ಪುದೀಗಳ್ ।
ನೀನೀಕಾಲಕ್ಕನುಚಿತ ಪರೀಹಾಸಮುಂಬಟ್ಟು ಕಾಂತೇ ॥
ಬಾನನ್ನಂ ನೀ ಪರಿಕಿಸಲು ಬೇಡಿನ್ನು ಚಂಡಾಂಗನೇ ಕೇಳ್ ।
ಸಾನೀಗಲ್ಮಾನಸದಿ ಮರುಗುತ್ತಿರ್ಪೆ ಸಂಭ್ರಾಂತನಿಲ್ಲಿ ॥ ೧೩ ॥

ಇಬ್ಬರೂ— ಅಯ್ಯೋ ಜೀವದಗೆಳತಿಯೇ ಎಲ್ಲಿ ಹೋದಿ ?

ಮಕರಂದ-- ಗೆಳೆಯಾ? ಏನೂ ಅರಿಯದೆ ಹೀಗೇಕೆ ಶೋಕಮಾಡುವೆ ?

ಮಾಧವ-- ಗೆಳೆಯನೇ ಮಾಲತಿಯು ನನ್ನಮೇಲಿನ ಪ್ರೇಮದಿಂದ ದುಃಖ ಪಟ್ಟು ನನ್ನ ದೆಶೆಯಿಂದ ಅಂಜಿ ಹೇಗೆಮಾಡುವಳೆಂಬದು ನಿನಗೆ ಗೊತ್ತಿಲ್ಲವೇ ?

ಮಕರಂದ-- ಅದಂತೂ ನಿಜನೇ. ಆದರೆ ದೇವಿಯವರ ಪಾದದರ್ಶನದ ಹೆಶೆಯಿಂದ ಅತ್ತಕಡೆಗೆ ಹೋಗಿರಬಹುದು. ಅಲ್ಲಿಯಾದರೂ ಹೋಗಿ ನೋಡುವಾ.

ಇಬ್ಬರು-- ಹಾಗಾವರೂ ಆಗಬಹುದು.

( ಹೀಗೆಂದು ಇಬ್ಬರೂಕೂಡಿ ಹೋಗುತ್ತಾರೆ )

ಮಕರಂದ--( ತನ್ನಷ್ಟಕ್ಕೆ )

॥ ಮಾಲಿನಿ ॥

ತರುಣಿಸುಖದಿ ನಮ್ಮೊಳ್ ಬರ್ಪಳೋ ಇಲ್ಲವೋ ನಾ ।
ನರಿಯೆ ಭಗವತೀಗೇಹಕ್ಕೆ ಪೋಗಿರ್ಪಳೋ ನೋ ॥
ನರರು ಗೆಳೆಯರಂ ಮತ್ತೆಲ್ಲ ನೆಂಟರ್ಗಳಂ ಕೂ ।
ಡಿರುವದು ತಿರವಲ್ಲನಂ ಚಂಚಲಾತೇಜ ಮೆಂಬೋಲ್ ॥ ೧೪ ॥

---

# ಒಂಭತ್ತನೆಯ ಅಂಕ.

( ಸೌದಾಮಿನಿಯು ಬರುತ್ತಾಳೆ )

ಸೌದಾಮಿನೀ-- ಈಗ ನಾನು ಸೌದಾಮಿನಿಯು ಪರಮಪೂಜ್ಯವಾದ ಶ್ರೀಶೈಲಪರ್ವತದಿಂದ ಹೊರಟು ಪದ್ಮಾವತಿಗೆ ಹೋಗುವೆನು. ಅಲ್ಲಿ ಮಾಲತಿ ಯಿಂದಗಲಿದ ಮಾಧವನು ಗೆಳೆಯರನ್ನು ಕೂಡಿಕೊಂಡು ಮನೆಯನ್ನು ಬಿಟ್ಟು ಹೊರಬಿದ್ದು ಬ್ರಹದ್ರೋಣೀಪರ್ವತದ ಅಡವಿಯನ್ನು ಸೇರಿರುವನು. ಮಾಲತಿಯೂ ತಾನೂ ಕೂಡಿ ನೋಡಿದ ಪ್ರದೇಶಗಳನ್ನು ಈಗ ಅವನೊಬ್ಬನೇ ನೋಡಲಾರನು. ಅದರಿಂದ ಅವನ ಬಳಿಗೆ ಹೋಗುವೆನು. ಅಹಹ, ನಾನು ಹಾರುವಾಗ್ಗೆ ಎಲ್ಲ ಪರ್ವತಗಳೂ, ನಗರಗಳೂ, ಊರುಗಳೂ, ಅರಣ್ಯಗಳೂ, ನದಿಗಳೂ, ಗುಂಪುಗುಂಪಾಗಿ ಕಣ್ಣಮುಂದೆ ಹಾದು ಹೋದವು. ( ಹಿಂದಕ್ಕೆನೋಡಿ ) ಶಹಾಬಾಸು.

॥ ಉತ್ಪಲಮಾಲಾ ॥

ಸಾರೆಯುಶುದ್ಧ ನೀರಿನನುರೂಪದ ಬೆಳ್ಳಿಯ ಒಡ್ಡಿಯಾಣಮುಂ ।
ಮೀರಿದ ಶೋಭೆಯಿಂಧರಿಸಿ ಪದ್ಮಪುರಂ ಬೆಳಗುತ್ತಲಿರ್ಪುದಂ ॥
ಏರುತ ಮೇಲೆ ತೋರ್ಪ ಸುರಮಂದಿರ ಗೋಪುರ ಸೌಧಭಿತ್ತಿಯಿಂ ।
ತೋರುವದೀಗ ಮೇಲಿರುವ ಸ್ವರ್ಗವ ಭೇದಿಸಿದಂತೆ ಚಂದದಿಂ ॥ ೧ ॥

॥ ಚಂಪಕಮಾಲಾ ॥

ಲವಣೆಯು ಸಾಲುಗೊಂಡ ತೆರೆಯಿಂಮುಗಿಲಲ್ಲಿಯು ಮೋಡತೋರುತಲ್ ।
ಜವದಿಜನಕ್ಕೆ ಮೋದವನೆ ಬೀರುತೆ ದಂಡೆಗಳಲ್ಲಿ ಹುಲ್ಲಿನಿಂ ।
ಭವನಗಳಿಂದ ಸೌಖ್ಯವನುತಾ ಕೊಡುತಿರ್ಪುದು ಪುಂಗುವಂಗಳಿಂ ॥
ಗವು ಮುದದಿಂದ ಕಾಲಕಳೆಯುತ್ತಮೆ ಗೋವುಗಳಲ್ಲಿ ಕೂಡಿಮೇಣ್ ॥ ೨ ॥

( ಮತ್ತೊಂದು ಕಡೆನೋಡಿ ) ಇಲ್ಲಿ ಪವಿತ್ರವಾದ ಸಿಂಧೂನದಿಯ ದಂಡೆಗಳನ್ನು ನೋಡಿದರೆ ಭೂಮಿಯು ಹರಿದಂತೆ ತೋರುತ್ತದೆ.

॥ ಇಂದ್ರವಜ್ರಾ ॥

ಇಲ್ಲಿರ್ದ ಸಿಂಧೂತಟದಾದ್ರಿಯೊಳ್ ತಾ ।
ನುಲ್ಲಾಸದಿಂ ಸೊಂಡಿಲ† ಕೂಗಿದಂತಿ ।
ಗಿಲ್ಸೆಲ್ಲ ಮೋಡಂಗಳು ಗರ್ಜಿಸುತ್ತಿ ।
ರ್ದಿಲ್ಲೆಲ್ಲ ತುಂಬಿರ್ಪವು ಕಂದರಂಗಳ್ ॥ ೩ ॥

ಈ ಯರಣ್ಯದಲ್ಲಿಯ ಭೂಮಿಗಳು ಪಕ್ವವಾದ ಬಿಲ್ವಮರಗಳಿಂದ ಮಗಮಗಿಸುತ್ತವೆ. ಶ್ರೀಗಂಧ, ಅಶ್ವಕರ್ಣ, ಪಾಟಲ ಮೊದಲಾದ ಗಿಡಗಳು ದಟ್ಟವಾಗಿರುತ್ತವೆ. ಇವುಗಳನ್ನು ನೋಡಿ ಗೋದಾವರಿಯ ದಕ್ಷಿಣದ ಅರಣ್ಯಗಳ ನೆನಪಾಗುತ್ತದೆ. ಅಲ್ಲಿ ಎಳೆಯ ಕದಂಬ, ಮತ್ತು ನೀರಲಗಿಡಗಳು ದಟ್ಟವಾದ ಕತ್ತಲೆಯನ್ನುಂಟು ಮಾಡುತ್ತವೆ. ಅಲ್ಲಿಯ ಪರ್ವತಗಳಿಗೆ ಗೋದಾವರಿಯು ಒಡ್ಯಾಣದಂತೆ ಶೋಭಿಸುತ್ತದೆ. ಅದು ಗಿರಿಗಂಹರಗಳಲ್ಲಿ ಹರಿಯುತ್ತಿರುವದರಿಂದ ಅದರ ಪ್ರವಾಹದ ಪ್ರತಿಧ್ವನಿಯಿಂದ ಗುಡ್ಡಗಳೆಲ್ಲ ಆರ್ಭಟಿಸಿದಂತೆ ತೋರುತ್ತದೆ. ಇಲ್ಲಿ ಮಧುಮತಿ, ಮತ್ತು ಸಿಂಧೂನದಿಗಳ ಸಂಗಮ ತೀರ್ಥದಲ್ಲಿ ತನ್ನಿಂದ ತಾನೇ ಹುಟ್ಟಿದ ಶ್ರೀ ಶಂಕರನಿರುವನು. ಇವನಿಗೆ ಸುವರ್ಣಬಿಂದು ವೆಂದು ಹೆಸರುಂಟು. (ನಮಸ್ಕಾರಮಾಡಿ)

॥ ಭಾ__ಷ ॥

ಅಖಿಲ ವರಗಳ ಕೊಡುವ ದೇವನೆ ।
ಸಕಲ ಭುವನದ ಕರ್ತ ಜಯಜಯ ।
ನಿಕರಪಾಪವ ಹರಿಪಸಸಿದಲೆ ವೇದ ಸಾರನೆ ನೀ ॥
ಕಕುಲತೆಯ ತೋರುವದು ಸರ್ವರ ।
ಭಕುತರಂದಯಮಿಟ್ಟು ಪೊರೆಯೈ ।
ಯುಕುತಿಯಿಂ ಪಾಲಿಪುದು ಜಯಜಯ ಮದನನಳಿದವನೇ ॥ ೪ ॥

(ತುಸು ಮುಂದಕ್ಕೆ ಸಾಗಿ)

॥ ಉತ್ಪಲಮಾಲಾ ॥

ತೋರ್ಪುದು ಕಣ್ಣಿಗೀಗಲತಿ ಸುಂದರಮೀಗಿರಿ ಶೃಂಗಗಳಿಂದಿಂ ।
ದೇರ್ಪವು ಮೋಡಗಳ್ ತುದಿಗೆ ನೀಲಿಯ ಬಣ್ಣದ ಶೋಭೆಯಿತ್ತು ಸೇರ್ ॥

---

† ಗಜಪತಿ

ದರ್ಪದಿ ಕೂಗುತಿರ್ಪವತಿ ಚಂದದಿ ಸೋಗೆಗಳಿಲ್ಲಿ ನೋಡದಿಂ ।
ದಿರ್ಪುವು ದೊಡ್ಡ ಸುಂದರಮನೋಹರ ಬಣ್ಣದ ಕಲ್ಗಳಲ್ಲಿಯು ॥ ೫

॥ ಚಂಪಕಮಾಲಾ ॥

ಕುಹರದಿಕೂತ ಚಿಕ್ಕಕರಡೀಮರಿ ಗುರ್ಗುರ ಶಬ್ದಮಾಳ್ಪವೂ ।
ಬಹುಬಲಪೊಂದುತಾಧ್ವನಿಯು ಸಂಚರಿಸುತ್ತಿಹುವಿಲ್ಲಿ ಗುಡ್ಡದೋಳ್
ವಿಹರಿಸುತಿರ್ಪ ಹಸ್ತಿಗಳು ಶಲ್ಲಕಿ ಶಾಖೆಗಳನ್ನು ಶೀಳಲೂ !
ಕಹಿಜಡಗಂಧ ವಿಲ್ಲಿವಿಷಸ್ವಾದವಬೀರುತೆ ಹಬ್ಬುತಿರ್ಪುದೂ ॥ ೬

( ಮೇಲಕ್ಕೆ ನೋಡಿ ) ಮಧ್ಯಾಹ್ನವೇ ಆಯಿತಲ್ಲ. ಯಾಕಂದರೆ ಈಗ

॥ ಉತ್ಪಲಮಾಲಾ ॥

ಕಾಶ್ಮರಿಬಿಟ್ಟು ಪೋಗುತಿವೆ ಪಲ್ಲವತುಂಬಿದ ಮಾಲವೃಕ್ಷಕೀ ।
ರೇಶ್ಮೆಯ ಬಣ್ಣದಕ್ಕಿಗಳು ನೀರಿಗೆ ಪೋಗುತಿರುತ್ತವಿಲ್ಲಿ ತೀ ॥
ರಾಶ್ಮದಧಾನ್ಯ ತಿನ್ನದಲೆ ವೃಕ್ಷದ ಶಾಖೆಯೊಳಿಲ್ಲಿ ಪಾರಿವಾ ।
ಳಂ ಸ್ವಪಿಸಿರ್ಪುದೀಗ ಬುಡದೋಳ್ ನೆರೆಕೂಗುವ ಕೋಳಿತೋರ್ಪುದು ॥ ೭

ಒಳ್ಳೇದು, ಮಾಧವ ಮಕರಂದರನ್ನು ಹುಡುಕಿ ಮುಂದಿನ ಕೆಲಸಕ್ಕೆ ಹತ್ತು ವೆನು ( ಹೀಗೆಂದು ಹೋಗುವಳು )

## ಶುದ್ಧ ವಿಷ್ಕಂಭಕ.

---

( ಆ ಮೇಲೆ ಮಾಧವ, ಮಕರಂದರು ಬರುತ್ತಾರೆ )

ಮಕರಂದ-- ( ದೀನಾವಸ್ಥೆಯಿಂದುಸುರ್ಗರೆದು )

॥ ಉತ್ಪಲಮಾಲಾ ॥

ಸಂಕಟದಲ್ಲಿ ನಾವು ತೊಳಲುತ್ತಿಹೆ ವಿಲ್ಲದೆ ಶಾಂತಿಯಾಶೆಯೀ ।
ಗಂಕಿತವಿಲ್ಲದೈವ ಮನ ಮೋಹವಿ ಕಳ್ತಲೆಯಲ್ಲಿ ಕೂತಿತು ॥
ಶಂಕಿಯೊಳೀಗ ಸುಮ್ಮನಿರುತಿರ್ಪೆವು ಕಾಣದೆ ಕಾರ್ಯಮಾರ್ಗವಂ ।
ಶಂಕರಪಾರಮಾಡಲು ಸಮರ್ಥನು ಸಂಕಟದಿಂದ ಲೆಮ್ಮನೂ ॥ ೮

ಮಾಧವ--ಅಯ್ಯೋ, ಪ್ರಾಣಪ್ರಿಯೆ, ಮಾಲತಿ ಎಲ್ಲಿರುವಿ ನಿಜವಾ ಕಾರಣವು ನಮಗೆ ಏನೂ ತಿಳಿಯುವೆ ಒಮ್ಮಿಂದೊಮ್ಮೆ ಸೀನು ಹೇಗೆ ಇಲ್ಲದ ತಾದಿ! ನಿರ್ದಯಳೇ ಸಾಕು. ನನ್ನಲ್ಲಿ ದಯವಿಟ್ಟು ನನಗೆ ಮೋರೆ ತೋರಿಸ

॥ ಮಂದಾಕ್ರಾಂತ ॥

ಕಾಂತೇ ನೀನೀಗಿನಿತು ಕತಿಯಂ ತೋರಲೇಂ ಕಾರಣಂ ಪೇಳ್ ।
ನೀಂ ತೋರಿರ್ದಾಪ್ರಣಯಗಳಿಗಾಧಾರ ನಾನಪ್ಪನಂ ನಾ ॥
ಮಾತೋಳಂ ಕಂಕಣ ಧರಿಸಿದಾನಂದ ಮೂರ್ತಿಸ್ವರೂಪಂ ।
ಏತಕ್ಕೀಗಳ್ ನಯನಕೆನಗಿಂತಾಯ್ತುದೂರಂ ಲತಾಂಗೀ ॥ ೯ ॥

ಗೆಳೆಯಾ. ಮಕರಂದನೇ, ಇಂಥ ಪ್ರೇಮವು ಜಗತ್ತಿನಲ್ಲಿ ಸಿಗುವದು ಅಸಂಭವ.

॥ ಶಾರ್ದೂಲ ವಿಕ್ರೀಡಿತ ॥

ಕಂದರ್ಪಂ ಸುಕುಮಾರ ದೇಹವನದಂ ತಾಪಂಗಳಿಂ ಪೀಡಿಸಲ್ ।
ಸಂದೇಹಂಗೊಳದೆಲ್ಲ ತಾಳ್ದು ಮನದೋಳ್ ಪ್ರಾಣಂಗಳಂ ನೀಗಲಾ ॥
ಗೊಂದೇ ಮಾನಸದಿಂದೆ ನಿಶ್ಚಯಿಸಿದಳ್ ಪುಲ್ಗೆಂದು ತಜ್ಜೀವಮಂ ।
ನಿಂದಾವಾದವ ತಾರದೇ ಮನ ದೊಳೆನ್ನರ್ಧಾಂಗಿಯಾದಳ್ ಸಖೀ ॥ ೧೦ ॥

॥ ಮಲ್ಲಿಕಾಮಾಲೆ ॥

ನನ್ನೊಳಾಕೆ ವಿವಾಹ ಕಿಂತಲು ಮುನ್ನಪ್ರೇಮವ ತೋರಿಸೀ ।
ಮುನ್ನಗಾಣದೆ ತನ್ನ ಕಾರ್ಯವ ಸಾಧನಾಶಯ ರೋಧಿಸೀ ॥
ನನ್ನ ಮೇಲಿನ ಪ್ರೇಮದಿಂದಲೆ ಸನ್ನುತಾಂಗೆಯು ಬಾಡಿದಳ್ ।
ನನ್ನ ಮಾನಸ ಚಿಂತೆಯೆಂಬ ತರಂಗದೊಳ್ಹೊಳಲಾಡಿತು ॥ ೧೧ ॥

( ಉತ್ಕಂಠತೆಯಿಂದ ) ಅಹಹ, ಇನ್ನೇನು ಮಾಡಲಿ.

॥ ಮಂದಾಕ್ರಾಂತ ॥

ಅಂತರ್ದಾಹಂ ಸುಡುತಿಹುದು ತಾ ಭೂತಿಯಂ ಮಾಡದೆನ್ನಂ ।
ಚಿಂತಾಮೋಹಂ ನನಗೆ ಮುಸುಕಲ್ ಭ್ರಾಂತನಾಗಿಲ್ಲ ನಾನೀ ॥
ಗಿಂತೆನ್ನಂತಃಕರಣ ಹರಿದಾಗಾದರೂ ಜೀವ ಪೋಗಿ ।
ಲ್ಲಂತರ್ಬಾಧಾಹತ ಹೃದಯದೆನ್ನಲ್ಲಿ ತುಂಡಾಗಲಿಲ್ಲಂ ॥ ೧೨ ॥

ಮಕರಂದ— ಮಧ್ಯಾನ್ಹದ ಸೂರ್ಯನು ನಮ್ಮ ದುರ್ದೈವದಂತೆ ಬಲು ತಾಪಕೊಡುತ್ತಿರುವನು ನಿನ್ನ ದೇಹದ ಸ್ಥಿತಿಯಂತೂ ಹೀಗಿರುವದು. ಈ ಪದ್ಮಸರೋವರದ ದಂಡೆಯಲ್ಲಿ ತುಸುಹೊತ್ತು ಕೂಡ್ರು ಇಲ್ಲಿ,

॥ ವಸಂತ ತಿಲಕ ॥

ದಟ್ಟಾದಗಂಧವನು ತಾವರೆ ಪೊಗ್ಗಿಯಿಂದಂ ।
ಕಟ್ಟೀಗ ತಂದು ಪವನಂ ಸುಖಮೀವ ನಿನ್ನೊಳ್ ॥
ತಟ್ಟುತ್ತ ನೀರ್ಕಣಗಳಂ ತೆರೆಯಿಂದಲಾತಂ ।
ದಟ್ಟಾಗಿ ತಂದು ಕೊಡುತಿರ್ಪನು ತಾಪಹಾರೀ ॥ ೧೩ ॥

( ತುಸು ಅಡ್ಡಾಡಿ ಇಬ್ಬರೂ ಕೂಡ್ರುವರು )

ಮಕರಂದ—( ತನ್ನಷ್ಟಕ್ಕೆ ) ಒಳ್ಳೇದು. ಇವನ ಮನಸ್ಸನ್ನು ಮತ್ತೊಂದು ಕಡೆಗೆಳೆದು ನೋಡುವ. ( ಎಲ್ಲರೂ ಕೇಳುವಂತೆ ) ಗೆಳೆಯಾ, ಮಾಧವಾ,

॥ ಉಪೇಂದ್ರ ವಜ್ರಾ ॥

ಸರೋವರಂ ಸುಂದರ ಮಿರ್ಪುದಿಲ್ಲೀ ।
ಸರೋಜ ದಂಡಂಗಳ ಮೇಲೆ ಹಂಸಂ ।
ವಿರಾಜಿಸುತಿರ್ಪುದು ನೋಡುತೀಗಳ್ ।
ವಿರಾಮವಂ ಮಧ್ಯದಿ ಪೊಂದು ನೀನು ॥ ೧೪ ॥

( ಮಾಧವನು ಹುಚ್ಚನಂತೆ ಏಳುವನು )

ಮಕರಂದ—ಇದೇನು ಬುದ್ಧಿಭ್ರಮಣವಾದವನಂತೆ ಎದ್ದು ಮತ್ತೊಂದು ಕಡೆಗೆ ಹೊರಟನಲ್ಲ. (ಉಸುರ್ಗರೆದು ಎದ್ದು) ಗೆಳೆಯಾ, ಶಾಂತನಾಗು ನೋಡು—

॥ ಚಂಪಕ ಮಾಲಾ ॥

ಗೆಳೆಯನೆ ನೋಡು ದಂಡೆಯೊಳು ಮಲ್ಲಿಗೆಮೊಗ್ಗೆಗಳಿಂದೆ ತುಂಬಿದೊಂ ।
ದುಳಿಯದೆ ಶೋಭಿಸುತ್ತಿರುವ ಕಂಟಿಗಳಲ್ಲದೆ ಚಿತ್ರದಲ್ಲಿ ಪೂ ॥
ಗಳನರು*ವಿಂದೆ ನೀರು ಮುಗಿಸುತ್ತಿದೆ ಪರ್ವತದಲ್ಲಿ ಮೋಡಗಳ್ ।
ನಿಲುಗೊಡೆದೋರೆ ಸೋಗೆಗಳು ನರ್ತಿಸುತಿರ್ಪುವು ಮೋದದಿಂದಲೇ ॥೧೫॥

॥ ಸ್ರಗ್ಧರೆ ॥

ಶೈಲಾಗ್ರಂ ಮೋಡ ಸಾಲ್ಗೊಂಡಿರೆ ನಿಚಯದಿ ನೀಲಾಂಗಮಾಗಲ್ ಕದಂಬಂ ।
ಸ್ಪೈಲಾಗಿರ್ದೆ ಮನೋಹಾರಿ ಕುಸುಮಗಳ ಗುಚ್ಛಂಗಳಂ ನೀಡುತಿರ್ದೆ ।
ಬೈಲೊಳ್ ಬೋರಾಡುತಿರ್ದೀ ನದಿಯೊಳು ಗರಿಪೂವೀಗ ಪುಟ್ಟಿರ್ಪುದಿಲ್ಲೀ ।
ಶೈಲೇಂದ್ರಂ ಲೋಧ್ರಪುಷ್ಪಂಗಳ ಪರಿಮಳದಿಂ ಮೋದನಿನ್ನಲ್ಲಿ ಬೀರ್ಗೆ ॥೧೬॥

---

* ಪರಿಮಳ.

ಮಾಧವ--ಗೆಳೆಯನೇ ನೋಡಿದೆನು. ಆದರೆ ಈ ಅರಣ್ಯ, ಪರ್ವತ, ನದಿಯು ದಂಡೆಗಳ ಸೌಂದರ್ಯವನ್ನು ನಾನು ನೋಡಲಾರೆನು ಇದೇನು ? ( ಕಣ್ಣಿಗೆ ನೀರುತಂದು ) ಅಥವಾ ಮತ್ತೇನು ?

॥ ಚಂಪಕಮಾಲಾ ॥

ಅರಳಿದ ಸರ್ಜ ಪುಷ್ಪದ ಪರಾಗವ ಹೊತ್ತಿಹ ಪೂರ್ವ ವಾತದಿಂ ।
ಬಿರಿತಿಹ ಮೋಡವಿಂದ್ರನ ಧನುಷ್ಯದರೂಪವ ತೋರುತಿರ್ಪುದೀ ।
ಧರಣಿಯು ಧಾರೆಯಿಂದ ಹಸಿಯಾಗುತಲೀವುದು ಗಂಧವೆನ್ನೊಳೀ ।
ಗುರಿಗದಿರುಮ್ಮೆಯಿಂದ ಬೆವರೇಳ್ವುದು ಗಾಳಿಯು ಬೀಸೆ ಪೋಪುದು ॥ ೧೭ ॥

ಅಯ್ಯೋ ಮಾಲತೀ ?

॥ ಹರಿಣೀ ॥

ದಿಶಗಳೊಳು ತುಂಬಿರ್ಪೀ ಮೋಡಂ ತಮಾಲದ ಬಣ್ಣದಿಂ ।
ದೆಸೆಯು ಹಸಿಯಂ ಪೊತ್ತಿರ್ದೀ ಮಾರುತಂ ಸುಳಿಯುತ್ತಿರಲ್ ॥
ವಸುಧೆಯೊಳು ನಾನೋರ್ವಂ ಶಕ್ರಾಂಬುವಂ ಪ್ರಣಯಂಗಳೊಳ್ ।
ಮಿಸುಪಶಿಖಿಯಂ ಕ್ರೀಡಾಸಕ್ತಂ ವಿಲೋಕಿಸಲೆಂತುಮೇಣ್ ॥ ೧೮ ॥

( ಉಸುರ್ಗರೆದು ದುಃಖಪೀಡಿತನಾದಂತೆ ನಟಿಸುವನು )

ಮಕರಂದ--ನನ್ನ ಮಿತ್ರನು ಬಲು ಭಯಂಕರ ಯಾತನೆಗಳಿಗೊಳಗಾಗಿರುವಂತೆ ತೋರುತ್ತದೆ.

( ಕಣ್ಣಿಗೆ ನೀರುತಂದು ) ಮೂರ್ಖನಾದ ನಾನು ಏನೂ ತಿಳಿಯದೆ ವಿನೋದದನ್ನಾರಂಭಿಸಿರುವೆನು. ( ಉಸುರ್ಗರೆದು ) ಈ ರೀತಿಯಿಂದ ಮಾಧವನ ಆಶೆಯೇ ಮುಗಿದಂತಾಯಿತು. ( ಅಂಜಿನೋಡಿ ) ಮೂರ್ಛೆಹೊಂದಿದನೇ ? ಅಯ್ಯೋ ಇವನ ಪ್ರೀತಿಯವಳಾದ ಮಾಲತಿಯೇ, ನೀನು ಎಂಥ ಕಲ್ಲೆದೆಯವಳು—

॥ ವಸಂತತಿಲಕ ॥

ನೀ ನಿನ್ನ ಬಂಧುಗಳ ಲೆಕ್ಕಿಸದೀತನೊಳ್ ತೋ ।
ರ್ದಾ ನಿನ್ನ ಕೋರಿಕೆಗಳೊಪ್ಪಲಿದೋರ್ವ ಸಾಸ ॥
ಕ್ಕೀ ನಿಷ್ಠುರತ್ವವಿದನೊಳ್ ಧರಿಸಿರ್ದದೀತ ।
ಕ್ಕೈ ನಿನ್ನೊಳೀತನಪರಾಧವ ಕಂಡಿಯಾ ಪೇಳ್ ॥ ೧೯ ॥

ಏನುಮಾಡಲಿ, ಇನ್ನೂ ಏಳಲೊಲ್ಲನು. ಅಹಾ, ನನ್ನನ್ನು ಮೋಹವು ಮ
ಕುತ್ತದೆ.

॥ ಮಂದಾಕ್ರಾಂತ ॥

ಅಯ್ಯಯ್ಯೋ ನನ್ನೆದೆಯೊಡೆಯಿತೀಗೆಲ್ಲ ಲೋಕಂ ವಿಶೂನ್ಯಂ ।
ಮೈಯ್ಯೊಳ್ ಬಂಧಂಗಳು ಸಡಿಲುತ ಜ್ವಾಲೆಯೊಳಂತರಾತ್ಮಂ ।
ಮೈಯ್ಯಿಕ್ಕಿರ್ಪ್ಪಂ ಕಳವಳಿಸಿ ತಾ ಕಳ್ತಲೊಳ್ ಕಾತರಂಮೇಣ್ ।
ಹೊಯ್ಯುತ್ತಿನ್ನಿಂದ್ರಿಯಗಳನು ಮೋಹಂ ಮುಸುಂಕಿರ್ಪುದೀಗಳ್ ॥

ಅಯ್ಯೋ ಕಷ್ಟವೇ ! ತಾಳಲಾರೆನು—

॥ ಚಂಪಕಮಾಲಾ ॥

ಬಳಗಕೆ ಮೋದವೀವ ಕುಮುದೇಂದುವು ಮಾಲತಿಯಾತ್ಮಭೂತನೀ ।
ಗಳಿಯುಲು ಜೀವಲೋಕ ಶುಭಸೂಚಕ ಲಕ್ಷಣವಿಲ್ಲವಂತೆಯಾ ॥
ಗಿಳಿಯೊಳು ಮಿತ್ರನನ್ನು ಮಕರಂದನು ತಾ ಕಳಕೊಂಡ ನಿಂದಿಗೇ ।
ಗೆಳೆಯನು ಕೇಡಿಗೀಗ ಗುರಿಯಾದುದು ಕಣ್ಣಲಿನೆಂತು ನೋಡಲೀ ॥

ಅಯ್ಯೋ ಗೆಳೆಯಾ ! ಮಾಧವಾ—

॥ ಮಲ್ಲಿಕಾಮಾಲೆ ॥

ಮಿತ್ರ ನೀನೆನಗಿಂದ್ರಿಯುಂಗಳೊಳಿಟ್ಟ ಚಂದನದಂದದಿಂ ।
ನೇತ್ರಕಿಂದುವಿನಂತೆ ಮೋದವ ಬೀರುತಿರ್ದೆಯೊ ನಿನ್ನನೀ ॥
ಮಾತ್ರದಲ್ಲಿ ಕಠೋರ ಕಾಲನು ಕೊಲ್ಲಲೆಂತಿದು ಸೈರಿಪೆಂ ।
ಗಾತ್ರಮೆಲ್ಲವು ತಣ್ಣಗಾಯಿತು ಜೀವ ನನ್ನದು ತಾಳದೂ ॥

॥ ಚಂಪಕಮಾಲಾ ॥

ಗೆಳೆಯನೆ ನೋಡು ನನ್ನ ನಗುತೆನ್ನೊಳು ಮೋದವ ಬೀರು ಮಾತನಾ
ಡಿಳಿಯೊಳಗಾರು ಸಂಗಡಿಗರಿಲ್ಲೆನಗೀಪರಿ ಸುಮ್ಮನಿರ್ಪರೇ ।
ಬಳಿಯೊಳು ಕೂತ ಮಿತ್ರ ಮಕರಂದನ ನೀ ಪರಿಯುಲ್ಲ ಮಾಳ್ಪರೇ ।
ಹಳಿಯುಲಿದೈವ ವಿನ್ನನಿತು ಮಾಧವನೀ ಸ್ಥಿತಿಯನ್ನು ಕಂಡು ನಾ ॥

( ಮಾಧವನು ಸ್ಮೃತಿಹೊಂದುವನು )

ಮಕರಂದ —( ದೀರ್ಘಶ್ವಾಸಬಿಟ್ಟು ) ಊ, ಇದೇ ಈಗ ತೋಳಿವ ಸ
ಮನೋಹರವಾದ ರಾಜಾಸನವಂತೆ ಹೊಳೆಯುವ ಹೊಸಮೋದವು ನೀ

ತಂಣಗಾಗಿರುವ ಗಾಳಿಯಿಂದ ನನ್ನ ಜೀವದ ಗೆಳೆಯನಿಗೆ ಸಂಜೀವಿನಿಯಾಯಿತು. ಅಹಾಃ ಎಚ್ಚರಾದನಲ್ಲ !

ಮಾಧವ— ಈ ಅಡವಿಯಲ್ಲಿ ನನ್ನ ಪ್ರಾಣಪ್ರಿಯಳಿಗೆ ಎನ್ನ ಸುದ್ದಿ ಯನ್ನು ಯಾರಸಂಗಡ ಕಳಿಸಲಿ.

॥ ಮಂದಾಕ್ರಾಂತ ॥

ಕಾಡೋಳ್ ಜಂಬೂ ಫಲದ ಭರದಿಂ ನೀರಿನೋಳ್ ರೆಂಬೆ ಬಾಗಿ ।
ದಾಡುತ್ತಲ್ಲೀ ಕಿರಿದೆರೆಗಳಿಂ ಸ್ರೋತಸಂ ಜಾರುತಿರ್ದೀ ॥
ವೋಡಂ ತೇಲುತ್ತಿರುವದೆದುರೋಳ್ ತೋರಿ ಶೈಲಾಗ್ರದೋಳ್ ತಾ ।
ನೀಡುತ್ತಲ್ಲೀಗಲೆ ಬಲಿತ ತಾ ಪಿಚ್ಛವರ್ಣಂಗಳಂ ಮೇಣ್ ॥ ೨೪ ॥

( ಗಡಬಿಡಿಯಿಂದ ಎದ್ದು ಕೈಜೋಡಿಸಿ )

ನಿನ್ನಸ್ನಾಲಿಂಗಿಸುತಿಹಳೆ ನಿನ್ನ ಪ್ರಿಯಳ್ ಚಂಚಲಾಂಗೀ ।
ನಿನ್ನೊಳ್‌ಪೆರ್ಚಿರ್ದತಿ ಪ್ರಣಯುವಂ ಚಾತಕಂ ತೋರ್ಪನೇ ಮೇಣ್ ॥
ನಿನ್ನಂಮೂಡಲ್ ದೆಸೆಯಮರುತಂ ಸೇವಿಸುತಿರ್ಪನೇಂ ಮೇಣ್ ।
ನಿನ್ನೊಳ್ ಶಕ್ರಾಯುಧನು ಬೆಳಗುತ್ತಂದದಿಂ ತೋರ್ಪನೇ ಪೇಳ್ ॥ ೨೫ ॥

ಕೇಳಿ )ಆಂ, ಇವನು ನನಗೆ ಒಪ್ಪಿಗೆಕೊಡುವಂತೆ ತೋರುತ್ತದೆ. ಕಂದರಗಳು ಪ್ರತಿಧ್ವನಿಗೆಯ್ಯುವದರಿಂದ ನವಿಲುಗಳು ಆನಂದದಿಂದ ಕಲಕಲ ಶಬ್ದವನ್ನೆಬ್ಬಿಸಿ ರುತ್ತವೆ. ಇವೆಲ್ಲ ಸ್ವರಗಳಿಂದ ನನಗೆ ಹೂಂ ಎಂದಂತೆ ಕೇಳುತ್ತವೆ. ಪೂಜ್ಯ ನಾದ ಮೇಘನೇ—

॥ ಮಂದಾಕ್ರಾಂತ ॥

ನೀನೆನ್ನ ಪ್ರಾಣದ ಸಖಿಯುಳಂ ದೈವದಿಂ ಕಂಡೊಡಾಗಳ್ ।
ಮುನ್ನಾಶಾಬಂಧವನು ಬಳಿಸೀ ಮಾಧವಾವಸ್ಥೆಯಂ ಪೇಳ್ ॥
ನೀನಾಲೋಲ್‌ಗನುನಯದಿ ಪೇಳಿನ್ನು ಜೀವಂತನೆಂದೂ ।
ತಾ ನೀವಾತರ್ಾ ಶ್ರವಣಬಲದಿಂ ಪ್ರಾಣವಂ ಕಾಯ್ದುಕೊಳ್ವಳ್ ॥ ೨೬ ॥

ಮಕರಂದ—( ಚಿಂತೆಯಿಂದ ) ಮೋಹವೆಂಬ ಗ್ರಹಣವು ಮಾಧವ ಚಂದ್ರ ನನ್ನು ಮುಸುಕಹತ್ತಿರುವದು. ಅಯ್ಯೋ, ಅಪ್ಪಾ, ಅವ್ವಾ, ದೇವಿಯೇ ನನ್ನನ್ನು ೞಿಸಿರಿ ಮಾಧವನ ಸ್ಥಿತಿಯನ್ನು ನೋಡಿರಿ.

ಮಾಧವ—ಅಯ್ಯೋ ಎಂಥ ಅನರ್ಥವಿದು.

॥ ವಸಂತತಿಲಕ ॥

ಪ್ರಾಣಪ್ರಿಯಳ್ ವನದೊಳಿಲ್ಲವಳನ್ನು ನೋಡು ।
ಕ್ಷೀಣಾಂಕ ಕಣ್ಣನೆಳೆದೊಯ್ಯಿತು ವಲ್ಲಿಮತ್ತಾ ।
ಪ್ರಾಣೇಶ್ವರೀ ನಯುವ ಕೊಂಡಿತುವಾನೆ ಯಾನಂ ।
ಮೋಹೇಕೆಯಿಂದ ಹೊಳಪಂ ಕಳೆದೊಯ್ದು ಲೋಧ್ರಂ ॥

॥ ಚಂಪಕಮಾಲಾ ॥

ಗುಣಗಳ ಬೀಡು ಪ್ರಾಣದೊಡೆಯಂ ಮಮ ಪ್ರೀತಿಯ ತಾಣಮೆನ್ನಕ
ಡಣುಗನಿರಲ್ಕೆಯಾಡಿ ಬೆಳೆದಿರ್ದನು ಬಾಂಧವ ವರ್ಗಕಾತ ನೀ ॥
ಗೆಣೆಸಲುಬಾರದಂಥ ಮನದೇಹದ ತಾಪಗಳೀವ ನನ್ನೊಳೀ ।
ಗೆಣೆಸದಲೆಲ್ಲ ನನ್ನ ಹೃದಯಂ ವಡೆದಿಲ್ಲವಿದೇನು ಸೋಜಿಗಂ

ಮಾಧವ— ಲೋಕದಲ್ಲಿ ಬ್ರಹ್ಮನು ನಿರ್ಮಿಸಿದ ಒಡವೆಗಳು
ನ್ನೊಂದು ಹೋಲುವದು ಸಹಜನವೆ. ಒಳ್ಳೇದು, ಹೀಗೆಮಾಡಿ ನೋ
( ದೊಡ್ಡಧ್ವನಿಯಿಂದ ) ಏನಿರಯ್ಯಾ, (ನಮಸ್ಕಾರಮಾಡಿ) ಈ ಬೆಟ್ಟದ ಅಡವಿಯ
ವನಚರರನ್ನು ಬೇಡಿಕೊಳ್ಳುವೆನು. ದಯಮಾಡಿ ಒಂದು ನಿಮಿಷ ನನ್ನ
ಯಕಡೆಗೆ ಲಕ್ಷಗೊಡಬೇಕು—

॥ ಹರಿಣೀವೃತ್ತಂ ॥

ತರುಣಿಯನು ನೀವಿಕಾಡಲ್ಲಿರ್ಪಗಿಲ್ಲಿಯು ಕಂಡಿರೋ ।
ವರಕುಲದಿ ಪುಟ್ಟಿರ್ದೀರುಂ ಜವ್ವನಕ್ಕೊಳಗಾದ ಸುಂ ॥
ದರ ಯುವತಿಯಂ ನೀವೇನಾಯಮ್ಮಕೆಗಿಲ್ಲಿಯು ಬಲ್ಲಿರೊ ।
ಹರಿಯುದವಳೋಳ್ ಮಿತ್ರಂಮಾರಂ ಸದಾಚರಿಸಾಕೆಯೋಳ್ ॥

ಅಯ್ಯೋ! ಹೇಗೆ ತಾಳಲಿ—

॥ ಉತ್ಪಲಮಾಲಾ ॥

ಕೂಗುವ ಸೋಗೆಗಳ್ ಮುದದಿ ನರ್ತಿಸುತಿರ್ಪವು ಕೇಳದೆನ್ನಮಾ ।
ತಂಗಳ ಜೊನ್ನಹಕ್ಕಿ ಬಲುಪ್ರೇಮದಿ ತನ್ನಯ ಕಾಂತೆಯುಂ ಕಪೋ ।
ಲಂಗಳ ಮೇಲೆ ಚಪ್ಪರಿಸುತಿರ್ಪುದು ಪೂಪುಡಿಯುಳ್ಳ ಕೆಯ್ಗಳಿಂ ।
ದೀಗಿದು ಕಾಲವಲ್ಲತಿರುಕಂಗೆನುತೆಲ್ಲರು ಪೇಳುತಿರ್ಪರಾ ।

ಇಲ್ಲಿನೋಡು—

॥ ಉತ್ಪಲಮಾಲಾ ॥

ಕಾಂತೆಯ ದಂತಗಳ್ ತುಟಿಯ ಕೆಂಗದಿಂ ಪೊಳೆಯುತ್ತೆನೋಡಿಸಲ್ ।
ತಾಂತರ ಭಾಗದಲ್ಲಿ ನೆರ ಚಂದದಿ ಶೋಭಿಪ ದಾಡಿಮಕ್ಕೆ ಪೋ ॥
ಲ್ಕಂತಹ ವಕ್ತ್ರಮಂ ನೆಗಳ ಚುಂಬಿಸುತಿರ್ಪುದು ಕೋತಿ ಪ್ರೇಮದಿಂ ।
ದಿಂತೆನಗಾರು ಪೇಳರು ಮಮಾಂಗನೆ ಕಂತುಪು ತನ್ಮುಮೋದದೊಳ್ ॥೩೦॥

ಇಲ್ಲಿ ರೋಹಿಣೀವೃಕ್ಷದ ಟೊಂಗೆಯಮೇಲೆ ಕುತ್ತಿಗೆಯನ್ನಿಟ್ಟು ಗಂಡಾನೆಯು ವಿಶ್ರಮಿಸುತ್ತಿರುವದು.

॥ ಚಂಪಕಮಾಲಾ ॥

ತನುವಿನ ತೀಟಿಯಿಂ ಕಿರಿಯರಳ್ವಿಹ ನೇತ್ರದ ಕಾಂತೆಯಲ್ಲಿ ತಾ ।
ನನುಪಮ ಕೋರೆಯಿಂ ಮಸೆಯುತಿರ್ಪುದು ಕಾಡಿನೊಳಾನೆ ಗಾಳಿಯಂ ॥
ಪ್ರಣಯದಿ ಬೀಸುತಿರ್ದು ಕರಣೇಂದ್ರಿಯದಿಂ ಮುದಬೀರಿ ಪ್ರೀತಿಯಿಂ ।
ತಿನುತಿಹ ಶಲ್ಲಕೀ ಪ್ರಸವಮಂ ಕೊಡುತಾಕೆಗೆ ಮೋಹಿಸುತ್ತಿಹಂ ॥ ೩೧ ॥

( ಮತ್ತೊಂದೆಡೆಯಲ್ಲಿ ನೋಡಿ ) ಇವನಂತೂ–

॥ ಉತ್ಪಲಮಾಲಾ ॥

ಕಾಂತೆಯು ಕಾಣದಿಲ್ಲಿ ಕೊರಗುತ್ತಿಹ ನವಿಲೆಯು ಮೋಡಗರ್ಜಿಸಲ್ ।
ಕಾಂತೆಯ ತಾಳ್ದು ನೋಡುತಿಹ ಗರ್ಜಿಸಲೊಲ್ಲನು ತಿನ್ನಲೊಲ್ಲ ಹು ॥
ಲ್ಲಂ ತೊಳೆಯಲ್ದ ಲಂಗವನು ದೀರ್ಘಿಕೆಯಲ್ಲಿನ ಸುಮ್ಮನಿರ್ಪನೂ ।
ಶಾಂತತೆಯಿಂದ ಕೂತಿಹನು ಷಟ್ಪದಿಗಳ್ ಮುದವಿಲ್ಲನೆನ್ನುತಾ ॥ ೩೨ ॥

ಈ ಬೇಸರಗೊಂಡವನನ್ನು ತಕ್ಕೊಂಡು ಏನು ಮಾಡುವದದೆ. ( ಆನಂದದಿಂದ ) ಈ ಮದ್ದಾನೆಗಳಲ್ಲಿ ಶ್ರೇಷ್ಠನಾದವನನ್ನು ಅವನ ಪ್ರಾಣಪ್ರಿಯಳು ಕರೆಯುತ್ತಿರುವಳು. ಮಧುರ ಮತ್ತು ಗಂಭೀರವಾದ ಸ್ವರದಿಂದ ಗರ್ಜಿಸುತ್ತ ಸರೋವರದಲ್ಲಿ ಒಳನುಗ್ಗಿ ಕ್ರೀಡಿಸುತ್ತಿರುವನು. ಇದೇ ಈಗ ಅರಳಿದ ಕದಂಬ ಪುಷ್ಪದಂತೆ ಶೀತಲ ಗಂಧದಿಂದ ತುಂಬಿದ ದುಂಡನ್ನ ಗಲ್ಲಗಳೊಳಗಿಂದ ಹೊರಬೀಳುವ ಮದವು ದಂಡೆಯಲ್ಲೆಲ್ಲ ಕೆಸರಿನಂತೆ ಬಿದ್ದದೆ. ಒಂದೇಸವನೇ ತಾಳಹಿಡಿದು ಅಲ್ಲಾಡುವ ಮನೋಹರವಾದ ಕಿವಿಗಳಿಂದ ತೆರೆಗಳು ಒಡೆದು ತುಷಾರಗಳು ಹಾರುವದರಿಂದ ಸರೋವರದಲ್ಲಿಯ ಚಕ್ರವಾಕಗಳೂ ಹಂಸಗಳೂ ಬೆದರುತ್ತವೆ.

ಕಮಲದ ಬಳ್ಳಿಗಳನ್ನು ಈಡಾಡುವದರಿಂದ ಅದರ ಪರಿಮಳವು ತುಂಬಿ ಹೋ
ಗಿದೆ. ಇರಲಿ, ಇವನನ್ನು ಮಾತಾಡಿಸಿ ನೋಡುವ. ದೈವವಂತನಾದ ಗಜಶ್ರೇ
ಷ್ಠನೇ, ನಿನ್ನ ಪ್ರಾಯವು ಹೊಗಳತಕ್ಕದ್ದಾಗಿದೆ. ನಿನ್ನ ಪ್ರಿಯಳ ಮನವಲಿಸು
ವದರಲ್ಲಿಯಾದರೂ ನೀನು ಕುಶಲನಿರುವಿ. (ದೋಷವನ್ನು ತೋರಿಸಿ)

॥ ಮತ್ತೇಭವಿಕ್ರೀಡಿತ ॥

ಕರಿಯಾಡುತ್ತಲೆ ಕಿತ್ತುತೀ ಕಮಲಮಂ ಬಾಯೊಳ್ ಬರಲ್ ನೀರು ತಾ ।
ಭರದಿಂದಂ ಸುರಿಸುತ್ತಲಾಮುಗಿಪ ನೀರಂ ತನ್ನ ಕಾಂತಾ ಮುಖ ॥
ಕ್ಕರುಹುತ್ತಿರ್ಪನು ತನ್ನ ಪ್ರೇಮವನವಳೊಳ್ ಸೇಕಂಗಳಿಂ ಮಧ್ಯದೊಳ್ ।
ಮರೆತಂ ತಾ ಸರೆಯಿಂದ ಮಾಡಿಕೊಡೆಯುಂ ಮೇಲೆತ್ತಲರ್ಧಾಂಗಿಯೊಳ್
॥ ೩೪ ॥

ಏನು ಪ್ರತ್ಯುತ್ತರವನ್ನು ಸಹ ಕೊಡದೆ ಹೊರಟು ಹೋಗುವನಲ್ಲ.
ನಾನೇ ಹುಚ್ಚನಿರುವೆನು. ಈ ವನದಲ್ಲಿ ನನ್ನ ಜೀವದ ಗೆಳೆಯನಾದ ಮಕರಂದನ
ಕೂಡ ನಡೆದುಕೊಂಡಂತೆ ವನಚರಗಳ ಕೂಡ ಸಹ ನಡೆದುಕೊಳ್ಳಹತ್ತಿರುವೆನು.
ಗೆಳೆಯಾ, ಮಕರಂದಾ—

॥ ಮತ್ತೇಭವಿಕ್ರೀಡಿತ ॥

ಸುಡು ನೀನಿಲ್ಲಿದ ಬಾಳುವಂ ಗೆಳೆಯನೇ ನಾನೆಂತು ನಿನ್ನನ್ನು ಬಿ ।
ಟ್ಟಡಿಯುಂ ಭೂಮಿಯೊಳಿಕ್ಕಲಿನ್ನು ಸುಡು ಸೌಂದರ್ಯಾನ್ವಿತೀವಸ್ತುವಂ ।
ಸುಡು ನೀ ಮಾಲತಿಯಿಲ್ಲದಿರ್ದದಿನಮಂ ನಿಮ್ಮಿಬ್ಬರಂ ಬಿಟ್ಟುಬೇ ।
ರೆಡೆಯೊಳ್ ಕಾಣುವದೆಲ್ಲವೂ ಮೃಗಜಲಂ ಹೀನಂಗಳೇ ಬಲ್ಲರು ॥೩೫॥

ಮಕರಂದ—ಎಲಾ ಭ್ರಮೆಗೊಂಡು ಎಚ್ಚರಿಲ್ಲದಿದ್ದರೂ ಏನೋ ಒಂದು
ಗುರುತದಿಂದ ನನ್ನ ಮೇಲೆ ಹುಟ್ಟದಾರಭ್ಯದಿಂದಿದ್ದ ಪ್ರೀತಿಯು ನೆನಪಾಗಿದೆ.
ನಾನು ಸಮೀಪದಲ್ಲಿರುವದು ಅವನಿಗೆ ತಿಳಿದದೆ. (ಎದುರಿಗೆ ನಿಂತು) ದುರ್ದೈವಿ
ಯಾದ ಮಕರಂದನೆಂಬ ನಿನ್ನ ಗೆಳೆಯನು ಇಲ್ಲೇ ಇರುವನು.

ಮಾಧವ—ಜೀವದ ಗೆಳೆಯನೇ, ನನ್ನನ್ನು ಆವರಿಸು, ನನ್ನನ್ನು ಅಲಂಗಿಸು
ಮಾಲತಿಯ ಆಶೆಯನ್ನಂತೂ ನಾನು ಬಿಟ್ಟಂತಾಯಿತು.

ಮಕರಂದ—ನನ್ನ ಜೀವದೊಡೆಯನೇ ಬಾ, ಆವರಿಸುವೆನು. (ನೋಡಿ ದೀನ
ಸ್ವರದಿಂದ) ಅಯ್ಯೋ ಕಷ್ಟವೇ ! ನನ್ನನ್ನಾಲಿಂಗಿಸಬೇಕೆಂದವನು ನಿಶ್ಚೇತನನಾದ

ನಲ್ಲ. ಜೀವದಾಶೆಯು ಬೆನ್ನು ಹತ್ತುವದರಲ್ಲೇನೂ ಹುರುಳಿಲ್ಲ. ನನ್ನ ಗೆಳೆಯನು ಇಲ್ಲದಂತಾದನು. ನಾನಾದರೂ ನಿಶ್ಚಯ ಮಾಡಿದೆನು. ಗೆಳೆಯನೇ,

॥ ಮಲ್ಲಿಕಾ ಮಾಲೆ ॥

ಜೀವವೆನ್ನೊಳು ಭೀತಿಯಿಂ ತವಗೋಸುಗಂ ನಡಗುತ್ತಲಿ ।
ದಾರ್ವ ಕಾಲದೊಳೇನು ಬಪ್ಪುದೊ ಎಂದು ಕಾರಣವಿಲ್ಲದೆ ॥
ಭಾವಿಸುತ್ತಿರೆ ಸಂಕಟಂಗಳನೀಗ ನೀನಳಿಯಲ್ಕೆ ಮ ।
ತ್ತಾವ ಭೀತಿಯು ತೋರದೆನ್ನೊಳಗೆಲ್ಲ ನಾಶವ ಪೊಂದಿತು ॥ ೩೬ ॥

ಇಂದಿನವರೆಗೆ ನಾನು ಕಳೆದ ಕಾಲವೇ ಒಳ್ಳೇದು. ಯಾಕಂದರೆ ಆಸ್ಥಿತಿಯುಲ್ಲಾದರೂ ನೀನು ಜೀವದಿಂದಿದ್ದಿ, ಈಗಂತೂ—

ಕಾಯವೆನ್ನೊಳು ಭಾರವಾಯಿತು ಕೀಲಿಸಿರ್ಪುದು ಜೀವವೀ ।
ಕಾಯದೋಳ್ ಜಗವೆಲ್ಲ ಶೂನ್ಯವೆ ನಿಂತಿತಿಂದ್ರಿಯದಾಟವೂ ॥
ಮಾಯವಾಗಿರೆ ನೀನು ಲೋಕವು ಕಷ್ಟದಾಯಕವಾಯಿತು ।
ಜೀಯ ಕತ್ತಲೆ ಕಾಣುತಿರ್ಪುದು ಸರ್ವಭಾಗದೊಳಿಂದಿಗೆ ॥ ೩೭ ॥

( ವಿಚಾರಮಾಡಿ ) ಮಾಧವನೇ ಇಲ್ಲದಂತಾದ ಮೇಲೆ ಇನ್ನೇನು ಕೆಲಸವದೆ? ನಾನಾದರೂ ಯಾಕೆ ಜೀವಹಿಡಿಯಬೇಕು. ಆದ್ದರಿಂದ ಈ ಪರ್ವತದ ತುಟ್ಟತುದಿಯಿಂದ ಪಾಟಲಾವತಿಯಲ್ಲಿ ಬಿದ್ದು ಮರಣವಲ್ಲಿ ಮಾಧವನಕಿಂತ ಮುಂದಾಗುವೆನು. ( ದಯಾರ್ದ್ರ ಭಾವದಿಂದ ತಿರುಗಿ ನೋಡಿ ) ಅಯ್ಯೋ ಕಷ್ಟವೇ!—

॥ ಹರಿಣೀ ॥

ಹೊಳೆಯುವದು ಮಿತ್ರಾಂಗಂ ನೀಲೋತ್ಪಲ ದ್ಯುತಿಯಿಂದೆ ಮ ।
ತ್ತೆಳೆಯುತದನಪ್ಪುತ್ತಿರ್ದೆನ್ನೊಳ್ ಸುಶಾಂತಿಯು ತೋರದು ॥
ನಳಿನ ಮುಖಿ ಮಾಲತ್ಯಾಕಾಲಕ್ಕೆ ಲೋಲುಪ ದೃಷ್ಟಿಯಿಂ ।
ದಳಿಸದಿವನಂ ಪ್ರೇಮಭ್ರಾಂತಳ್ ಸುಪಾನವ ಮಾಡಿಪಳ್ ॥ ೩೮ ॥

ಆಹಹ! ಒಬ್ಬನಲ್ಲಿಯೇ ಇಷ್ಟೆಲ್ಲ ಸದ್ಗುಣಗಳು ಹೇಗೆ ಒಟ್ಟು ಗೂಡಿರಬಹುದು. ಗೆಳೆಯಾ, ಮಾಧವಾ—

॥ ಚಂಪಕ ಮಾ. ॥

ಅಳಿದಿಹ ಸಲ್ಲಿರಾಹುವಿನ ಬಾಯೊಳು ನಿರ್ಮಲ ಪೂರ್ಣಚಂದ್ರಮಂ ।
ಶೆಳೆಯಿತು ವಾಯು ವೇಗದೊಳು ದಟ್ಟಗೆ ಹಬ್ಬಿದ ಮೋಡವನ್ನುತಾ ॥

ಮುಳಿಯುತಲಗ್ನಿ ಪಣ್ಮೊರಗಿದೀಮರನಂನೆರಿ ಸುಟ್ಟುಬಿಟ್ಟನೀ ।
ಗಿಳಿಯೊಳು ಹೆಚ್ಚಿನಾತನಿವನೆಂದಿವ ನೀಪರಿ ಮೃತ್ಯುನುಂಗಿತು ॥ ೩೯ ॥

ಜೀವವಿಲ್ಲದಿದ್ದರೂ ನನ್ನ ಗೆಳೆಯನನ್ನಾಲಂಗಿಸುವೆನು, ಈಗ ನಾನುಬೇಡಿ ಕೊಳ್ಳುವದಿಷ್ಟೇ ( ಅಲಿಂಗಿಸಿ ) ಎಲೈ ಗೆಳೆಯನೇ, ಶುದ್ಧಕಲೆಗಳ ರಾಶಿಯೇ, ಸದ್ಗುಣಗಳಲ್ಲಿ ನನ್ನ ಗುರುವಿನಂತಿದ್ದವನೇ, ಮಾಲತಿಯು ತಾನಾಗಿಯೇ ಒರಿ ಸಿದ ಪ್ರಾಣನಾಥನೇ, ಕಾಮಂದಕಿಗೂ ಮಕರಂದನಿಗೂ, ಆನಂದ ಕೊಡುವ ಮಾಧವನೇ, ಅಂತ್ಯಾವಸ್ಥೆಯಲ್ಲಿ ನಿನ್ನನ್ನು ಕಡೆಯ ಸಾರೆ ಆಲಂಗಿಸುವೆನು. ಗೆಳೆಯನೇ, ಇನ್ನು ಕ್ಷಣಮಾತ್ರವಾದರೂ ಮಕರಂದನು ಜೀವದಿಂದುಳಿಯುವನೆಂದು ತಿಳಿಯಬೇಡ ಯಾಕಂದರೆ ?

|[ ಚಂಪಕಮಾಲಾ ]|

ಜಗದೊಳು ಪುಟ್ಟಿಯಾಡಿದೆವು ಕೂಡಿಯೆ ಬೀಡಿನೊಳೊಂದರಲ್ಲಿಯೇ ।
ನಗುತಲೆ ಕೂಡಿಯೊಂದೆ ಮೊಲೆಯುಂಡೆವು ಬಾಲ್ಯದಿ ಭೇದವಿಲ್ಲದೇ ॥
ತಗಬಗೆಯಿಂದ ನೀನು ತೊರೆದೆನ್ನನು ಪೋಪುದು ಯೋಗ್ಯವಲ್ಲವೀ ।
ಗಗಣೆಯೆ ಬಂಧು ಹಸ್ತದಲಿಯೊಬ್ಬನೆ ಸ್ವಾದಿಪುದಿಂತು ಯೋಗ್ಯವೇ ॥೪೦॥

( ದೀನಾವಸ್ಥೆಯಲ್ಲಿ ಅವನನ್ನು ಬಿಟ್ಟು ತುಸು ಅಡ್ಡಾಡಿ )

ಇಲ್ಲಿಯೇ ಕೆಳಬದಿಯಲ್ಲಿ ಪಾಟಲಾವತಿಯು ನದಿ ಇರುವದು- ಪವಿತ್ರವಾದ ನದಿಯೇ -

॥ ಕಂದ ॥

ಗೆಳೆಯನು ಪುಟ್ಟದ ತಾಣದೊ ।
ಳಿಳಿಯೊಳು ನಾ ಜನಿಸಲೆನಗೆಯನುವನು ಕೊಡು ಮ ॥
ತ್ತುಳಿಯದೆ ನಾನವನನುಚರ ।
ನುಳಿಯಲು ದಯಪಾಲಿಸೆನಗೆ ವರವನು ದೇವೀ ॥ ೪೧ ॥

( ಹೀಗೆಂದು ಬೀಳಹೋಗುವನು )

ಸೌದಾಮಿನಿ—( ಬಂದು ಒಮ್ಮೆಲೇ ಎಳೆದು ಸರಿಸಿ ) ಮಗನೇ ಸಾಕುಬಿಡು ಸಾಹಸ ಮಾಡಬೇಡ.

ಮಕರಂದ—ಅವ್ವಾ, ನೀನಾರು? ನೀನು ನನ್ನನ್ನು ಯಾಕೆ ತಡೆದೆ ?

ಸೌದಾಮಿನಿ— ಬಾಲಕಾ, ಮಕರಂದನೆಂಬುವವನು ನೀನೆಯೋ ?

ಮಕರಂದ—ಹೌದು. ಅವನೇ ನಾನು. ದುರ್ವೈವಿಯಾದ ಮಕರಂದನು. ಬಿಡು ಬಿಡು.

ಸೌದಾಮಿನಿ—ಮಗನೇ, ನಾನು ಯೋಗಿನಿ ಇರುವೆನು. ಮಾಲತಿಯು ಗುರ್ತವನ್ನು ತಂದಿರುವೆನು ( ಬಕುಲ ಮಾಲೆಯನ್ನು ತೋರಿಸುವಳು )

ಮಕರಂದ—( ಉಸುರ್ಗರೆದು ದೀನಸ್ವರದಿಂದ ) ಮಾಲತಿಯು ಇನ್ನೂ ಜೀವ ದಿಂದಿರುವಳೇ !

ಸೌದಾಮಿನಿ— ಹೌದು. ಮಾಧವನಿಗೇನಾಯಿತು? ನೀನು ಈ ಅಲ್ಲದ ಕೆಲಸವನ್ನು ಮಾಡಲು ಸಿದ್ಧನಾಗಿರುವಿ. ಇದರಿಂದ ನನ್ನ ಮನಸ್ಸು ಅಂಜುತ್ತದೆ.

ಮಕರಂದ—ಪೂಜ್ಯಳೇ ಅವನಿಗೆ ಮೂರ್ಛೆಬಂದಿತ್ತು. ನಾನು ಹಾಗೇ ಅವನನ್ನು ದುಃಖದಲ್ಲಿ ಬಿಟ್ಟುಬಂದೆನು. ಕಾರಣ ತೀವ್ರ ಬರ್ರಿ. ಅವನಸ್ಥಿತಿ ಏನಾ ಗಿದೆ ನೋಡುವ. ( ಗಡಿಬಿಡಿಯಿಂದ ಮುಂದೆಕ್ಕೆ ಸಾಗಿ )

ಮಕರಂದ—( ನೋಡಿ ) ಅಹಹ, ನನ್ನ ಗೆಳೆಯನು ಎಚ್ಚತ್ತಿರುವನಲ್ಲ.

ಸೌದಾಮಿನಿ—ಇಬ್ಬರವೂ ದೇಹಗಳು ಮಾಲತಿಯು ಹೇಳಿದಂತಿರುವವು.

ಮಾಧವ—( ಉಸುರಾಡಿಸಿ ) ಎಲಾ ಯಾರೋ ನನ್ನನ್ನು ಎಬ್ಬಿಸಿದರು. ( ವಿಚಾರಮಾಡಿ ) ಬಹಳಮಾಡಿ ಈ ಹೊಸ ಮೇಘನು ನನ್ನ ಸ್ಥಿತಿಯನ್ನರಿಯದೆ ಈ ಕೆಲಸ ಮಾಡಿರಬಹುದು. ಎಲೈ ಪೂರ್ವದ ವಾಯುವೇ

॥ ಹರಿಣಿ ॥

ಉದಕವನು ಪೊತ್ತಿರ್ದೀ ಮೋಡಂಗಳಂ ಪರಿವರ್ತಿಸು ।
ಮುದವ ಕೊಡು ನೀರಂ ಬೇಡುತ್ತಿರ್ಪ ಚಾತಕಗಳ್ಗೆ ಮ ॥
ತ್ತುದಿತ ಸುಖಮೋಳ್ ಮೂರ್ಛಾಕಾಲಕ್ಕೆ ಮೇಣ್ ಗರಿಪೂವಿನೊಳ್ ।
ಬೆದರಿಶಿಖಿಗಳ್ ಕೂಗಾಡುತ್ತೆನ್ನನೆಬ್ಬಿಸೆ ನೊಂದೆನು ॥ ೪೭ ॥

ಮಕರಂದ—ಯಾವತ್ತೂ ಪ್ರಾಣಿಗಳಿಗೆ ಜೀವಕೊಡುವ ವಾಯುವು ಒಳಿತು ಮಾಡಿದನು.

॥ ಚಂಪಕ ಮಾಲಾ ॥

ಮಳೆಯನು ಸೂಚಿಸುತ್ತಿರುವ ಗಾಳಿಯು ತನ್ನೊಳು ಗಂಧವನ್ನು ಮು ।
ನ್ನೆಳೆಯುತ ಕೇತಕೀಕುಸುಮದಿಂ ತರುಣೀ ಮುಖವನ್ನು ಕುಂತಳಂ ॥
ಗಳೊಳಗೆ ಸೇರಿ ಚುಂಬಿಸಿ ಕದಂಬದೊಳಿಂಚರದಿಂದೆ ಪಾಡುತಿ ।
ರ್ದಳಿಗಳ ಪಾರಿಸುತ್ತೆ ವಿರಹೀಜನರಂ ಸಿಡಿಸಿಡಿಪುತ್ತಿಹಾ ॥ ೪೮ ॥

ಮಾಧವ— ವಾಯುದೇವನೇ, ಆದರೂ ನಿನ್ನನ್ನೇ ಬೇಡಿಕೊಳ್ಳುವೆನು.

॥ ಚಂಪಕಮಾಲಾ ॥

ಬೆರೆಸುತ ನನ್ನ ಜೀವವ ಕದಂಬದ ಪೂಗಳ ಗಂಧದಲ್ಲಿ ನೀ ।
ಮರೆಯದಲೊಯ್ಯೊ ವಾತ ಮಮಕಾಂತೆಯಳಿದ್ಪೆಡೆಗಲ್ಲದಿದೊರ್ಡೆ ॥
ಮರುತನೆ ನಂನಕಾಮಿನಿಯ ಕಾಯದ ಕಂಪಿನ ತಂಪನೆನ್ನೊಳು ।
ಹರಡಿಸಿ ನೀನೆಮನ್ನನುಳಿಸಿಲ್ಲೆನಗಾಶ್ರಯನಿನ್ನನಲ್ಲದೆ ॥ ೪೪ ॥

(ಬೊಗಸಿಯನ್ನೊಡ್ಡಿ ನಮಸ್ಕರಿಸುವನು)

ಸೌದಾಮಿನಿ— ಕುರುಹಿನ ಪದಾರ್ಥವನ್ನು ಅರ್ಪಿಸಲಿಕ್ಕೆ ಇದು ಒಳ್ಳೇ ಉತ್ತಮ ಸಮಯವಿರುವದು. (ಬೊಗಸಿಯಲ್ಲಿ ಬಕುಲ ಮಾಲೆಯನ್ನು ಇಡುವಳು)

ಮಾಧವ— (ದಿಟ್ಟಿಸಿನೋಡಿ ಆನಂದದಿಂದ ಬೆದರಿ) ಇದು ಕಾಮದೇವನ ಗುಡಿಯ ಅಂಗಳದಲ್ಲಿಯ ಬಕುಲಗಿಡದ ಪುಷ್ಪಗಳ ಹಾರವು. ಇದನ್ನು ನಾನೇ ಸಿದ್ಧಪಡಿಸಿದ್ದೆನು. ಪ್ರಿಯಳ ಕುಚಗಳ ಮೇಲಿದ್ದು ಬಲುಮನೋಹರವಾಗಿ ತೋರುತ್ತಿತ್ತು, ಇದೇ ಆ ಮಾಲೆಯು,

॥ ಮಲ್ಲಿಕಾಮಾಲೆ ॥

ನೋಡಿದಾಗಲೆ ಸುಂದರಾಂಗಿಯ ಚಂದ್ರಶೋಭೆಯ ಮೋರೆಯಂ ।
ನೋಡಿತೆನ್ನಯ ಶಾಂತಿ ಪುಟ್ಟಿತು ಭ್ರಾಂತಿಯೊನ್ನೊಳಗಾಗಲೇ ॥
ಕೂಡಿಸುತ್ತಲೆ ಪೂಗಳಂ ಮುಗಿಸಿರ್ದ ಮಾಲೆಯ ವೇಗದಿಂ ।
ನೋಡಿದಳ್ ಮುದದಿಂ ಲವಂಗಿಕೆ ವ್ಯಸ್ತವಾಗಿಹ ಭಾಗಮಂ ॥ ೪೫ ॥

(ಆನಂದದಿಂದ ಹುಚ್ಚನಂತೆ) ಎಲೇ, ಹಟಮಾರಿ ಮಾಲತೀ ? ಇಲ್ಲಿ ನೀನು ಕಾಣುತ್ತೀ ? (ಸಿಟ್ಟಿಗೆದ್ದಂತೆ ನಟಿಸಿ) ನನ್ನ ಸ್ಥಿತಿಯನ್ನರಿಯದವಳೇ,

॥ ಉತ್ಪಲಮಾಲಾ ॥

ಜೀವವು ಪೋಗುತಿರ್ಪಡಲೆ ಸುಂದರಿಯಂಗಗಳೀಗ ಸುಟ್ಟಿಪೋಲ್ !
ಸಾವಿನಬಾಯೊಳಿರ್ಪತೆರ ದಿಂದಿಹೆ ಕಾಲವೆ ಚೇಷ್ಟೆಗಳ್ಗೆ ನೀ ॥
ನೀವ್ರದು ನೋಟವಂನೆನಗೆ ಕಳ್ತಲೆ ನನ್ನನು ನುಂಗುತಿರ್ಪದೀ ।
ಗಾವದು ಕಾಣಲೊಲ್ಲದು ಮಮಾಂಗನೆ ಮೋದವಬೀರು ನನ್ನೊಳೂ ॥ ೪೬ ॥

(ಸುತ್ತುಮುತ್ತು ನೋಡಿ ತಿಳುಕೊಂಡವನಂತೆ)

ಇಲ್ಲೆಲ್ಲಿ ಮಾಲತಿ (ಬಕುಲಮಾಲೆಯನ್ನು ನೋಡಿ) ಎಲೆ ನನ್ನ ಪ್ರಾಣ ಪ್ರಿಯಳ ಪ್ರೀತಿಗೆ ಪಾತ್ರವಾದ ಪೂಮಾಲೆಯೇ, ನೀನು ನನ್ನ ಮೇಲೆ ಮಹದುಪಕಾರ ಮಾಡಿರುವಿ.

॥ ಚಂಪಕಮಾಲಾ ॥

ಚದುರೆಯು ಮೋಹಪೆರ್ಚ್ಚಿ ಬಲ್ಲಃ ಹೆಚ್ಚಿನ ತಾಪದೊಳಾಕೆ ನೊಂದಿರಲ್ ।
ಮದನನ ತಾಪಕಾಂತೆಯೊಳು ದಾರುಣಮಾಗಿರೆ ತಾಳದಿರ್ದಳಾ ॥
ಗೆದುರಿನೊಳಿರ್ದ ನಿನ್ನನತಿ ಪ್ರೇಮದಿ ಯಪ್ಪಲು ಕಾಂತನಂದದೀ ।
ಮಧುರ ಸುವಾಸ ಯುಕ್ತಳವಳನ್ನುಳಿಸಿರ್ದೆಯೇ ಜೀವದಿಂದೆ ನೀ ॥೪೭॥

(ಕನಿಕರದಿಂದ ಉಸುರ್ಗರೆದು)

॥ ವಸಂತ ತಿಲಕ ॥

ಆನಂದವಿತ್ತೆ ಮದನಜ್ವರ ಪುಟ್ಟಿಸಿರ್ದೆ ।
ನೀನಂದು ನಮ್ಮೊಳನುರಾಗನ ಪೆರ್ಚಿಸಿರ್ದೆ ॥
ನೀನೆನ್ನ ಮತ್ತೆ ಸಖಿಯಾ ಕೊರಳಲ್ಲಿ ಸೇರು ।
ತ್ತಾ ನಮ್ಮ ಸ್ನೇಹವನು ಜೋಡಿಸಿಪೋದೆ ಮಾಲೇ ॥ ೪೮ ॥

( ಎದೆಯ ಮೇಲಿಟ್ಟುಕೊಂಡು ಮೂರ್ಛೆ ಹೊಂದುವನು )

ಮಕರಂದ— (ಸಮೀಪಕ್ಕೆ ಬಂದು) ಗೆಳೆಯನೇ ಶಾಂತನಾಗು.

ಮಾಧವ— (ಶಾಂತನಾಗಿ) ಮಕರಂದಾ, ಎಲ್ಲಿಂದಲೋ ಮಾಲತಿಯ ಪ್ರೇಮದ ಚಿನ್ಹವು ದೊರೆತಿರುವದು. ಕಾಣಲೊಲ್ಲದೇ ಇದು ಏನು? ನೀನು ಇದಕ್ಕೇನನ್ನುತ್ತೀ !

ಮಕರಂದ— ಈ ಪೂಜ್ಯಳಾದ ಯೋಗೀಶ್ವರಿಯು ಮಾಲತಿಯ ಗುರುತದ ಒಡವೆಯನ್ನು ತಂದಿರುವಳು.

ಮಾಧವ— (ದೀನಾವಸ್ಥೆಯಲ್ಲಿ ಬೊಗಸೆಯನ್ನೊಡ್ಡಿ) ಪೂಜ್ಯಳೇ ದಯವಿಟ್ಟು ಹೇಳು. ಆ ನನ್ನ ಪ್ರಾಣಪ್ರಿಯಳು ಜೀವದಿಂದಿರುವಳೇ ?

ಸೌದಾಮಿನಿ—ಬಾಲಕಾ, ಶಾಂತನಾಗು. ಆ ಬಾಲಿಕೆಯು ಜೀವದಿಂದಿರುವಳು.

ಮಾಧವ ಮಕರಂದರು --( ದೀರ್ಘಶ್ವಾಸಬಿಟ್ಟು ) ಪೂಜ್ಯಳೇ, ಹಾಗಾದರೆ ಇದರ ವೃತ್ತಾಂತವೇನು ?

ಸೌದಾಮಿನಿ— ಮೊದಲು ಖಡ್ಗಧರನಾದ ಅಘೋರಘಂಟನನ್ನು ಕರಾಲೆಯ ಗುಡಿಯಲ್ಲಿ ಕೊಂದದ್ದರಿಂದ–

ಮಾಧವ –– (ಅವಸರದಿಂದ) ಪೂಜ್ಯಳೇ ಸಾಕು, ಸಾಕು, ತಿಳಿಯಿತು.

ಮಕರಂದ— ಗೆಳೆಯಾ, ಅದೇನು ?

ಮಾಧವ— ಮತ್ತೇನು ಕಪಾಲಕುಂಡಲೆಯು ತನ್ನ ಇಚ್ಛೆಯನ್ನು ಪೂರ್ಣಮಾಡಿಕೊಂಡಳು.

ಮಕರಂದ— ಪೂಜ್ಯರೇ ಇದು ಹೀಗೆಯೋ ?

ಸೌದಾಮಿನಿ— ಹೌದು. ಬಾಲಕನು ಹೇಳಿದಂತೆಯೇ ಇರುವದು.

ಮಕರಂದ— ಅಯ್ಯೋ ಕಷ್ಟವೇ,

॥ ಉತ್ಪಲಮಾಲಾ ॥

ತಾವರೆ ಗುಂಪಿನೋಳ್ ಪೊಳೆವ ಶಾರದ ಕಾಲದ ಚಂದ್ರಬಿಂಬದಂ ।
ತಾವರ ಕನ್ನೆಯಳ್ ಬೆಳಗಿ ಶೋಭಿಸುತಿರ್ದಳು ಸರ್ವಲೋಕದೊಳ್ ॥
ಈವಿಧ ಬಂದ ಕಾಲಗತಿಯಿಂದಲೆ ನೋಡಗಳಿಲ್ಲ ಗುಂಪಿನಿಂ ।
ದೀವಿಧಿಯಿಂದೆ ಕೂಡು ತಳೆಯಲ್ ತೊಡಗಿರ್ಪದು ದುಃಖ
ದಾಯಕಂ ॥ ೪೯ ॥

ಮಾಧವ— ಪ್ರಿಯಳೇ, ಮಾಲತಿ! ಬಹಳ ಕಷ್ಟಗಳಿಗೊಳಗಾದೆ,

॥ ಕಂದ ॥

ತಸಿಗದಿನ ಕಲೆಯಂ ಕೇಳ್ ।
ವನಿತೆಯೆ ಪೊಗೆ ಮುಸುಕಿದಂತೆ ಕಾಪಾಲಕೆ ನಿ ॥
ನ್ನನು ಮುಸುಕಿರಲಾ ಕಾಲದಿ ।
ನಿನಗೆಂತಾ ಪೀಡೆ ನೋವನಿತ್ತಿತು ಪೇಳೇ ॥ ೫೦ ॥

ಹೆಚ್ಚಿನವಳಾದ ಕಪಾಲಕುಂಡಳೇ

॥ ಚಂಪಕಮಾಲಾ ॥

ಸಖಿಯುಳ ಕೋಮಲಾಂಗವದು ಪಾಲನೆಮಾಡಲು ಯೋಗ್ಯಮಿರ್ಪುದು ।
ಸುಖವವರಿಂದೆ ತೋರುವದು ರಾಕ್ಷಸಿಯಂದದಿ ಕಾಡಬೇಡ ನೀ ॥
ಶಿಖಿಯೊಳು ಗಂಧಯುಕ್ತ ಕುಸುಮಂಗಳ ಬೀಡೊನಕೀ ಬುಡಂಗಳಾ ।
ಮುಖಿಯೊಳಗಿತ್ತು ಕುಟ್ಟುವತೆ ಬಲ್ಲಿವರಾದವತೆಂದಿಗಾದರೇಂ ॥ ೫೧ ॥

ಸೌದಾಮಿನಿ— ಮಗನೇ ಸಾಕು. ಸಂತಾಪಕ್ಕೊಳಗಾಗಬೇಡ.

॥ ಇಂದ್ರವಜ್ರಾ ॥

ನಾನಾಗಲಾಸ್ಥಾನಕೆ ಬಾರದಿರ್ದ ।
ಲ್ಲಾನಾಗಸರ್ಪಕ್ಕೆದುರಾಗದಿರ್ದ ॥
ಲ್ಲಾನಿನ್ನ ಪ್ರಾಣ ಪ್ರಿಯಳನ್ನು ಕೊಲ್ಲ ।
ಲ್ಲಾನಿರ್ದಯಳ್ ರಾಕ್ಷಸಿ ಹೇಸದಿರ್ದಳ್ ॥ ೫೨ ॥

ಇಬ್ಬರೂ—( ನಮಸ್ಕರಿಸಿ )ಈ ಪೂಜ್ಯಪಾದಗಳದು ನಮ್ಮ ಮೇಲೆ ಬಹಳ ಅನುಗ್ರಹವಾಯಿತು. ಹೀಗೆ ನಮ್ಮ ಹಿತಚಿಂತನೆಯನ್ನು ಮಾಡುವ ಬಂಧುಗಳು ತಾವಾರು ?

ಸೌದಾಮಿನಿ— ಇದನ್ನು ನೀವು ಲಕ್ಷವಲ್ಲಿಡಿರಿ. (ಎದ್ದು ನಿಂತು) ನಾನು ಈಗ—

॥ ಚಂಪಕಮಾಲಾ ॥

ಗುರುಗಳ ಸೇವೆಯಿಂದ ತಪದಿಂದಲು ಮಂತ್ರಗಳಿಂದ ತಂತ್ರದಿಂ ।
ನಿರುತದಿ ಯೋಗದಿಂದಲಭಿಯೋಗಗಳಿಂದಲು ನನ್ನೊಳೀಗಪು ॥
ಟ್ಟಿರುತಿಹ ಶಕ್ತಿಯಿಂವಲತಿಪ್ರೇಮದಿ ನಾನಿಮಗೀಗ ಸಿದ್ಧಿಯಂ ।
ದೊರಕಿಸಿಕೊಟ್ಟು ಕಾರ್ಯ ನೆರವೇರಿಸಿ ತೋರ್ಪೆನು ನಿಮ್ಮ
ಸೌಖ್ಯಕೇ ॥ ೫೩

(ಮಾಧವನನ್ನು ತೆಕ್ಕೊಂಡು ಹೊರಟು ಹೋಗುವಳು)

ಮಕರಂದ— ಇದೇನಾಶ್ಚರ್ಯವು—

॥ ವಸಂತ ತಿಲಕ ॥

ಕಗ್ಗತ್ತಲಲ್ಲಿರುವ ನಮ್ಮೊಳು ತೋರಿವಿದ್ಯುತ್ ।
ಕುಗ್ಗುತ್ತನಮ್ಮ ನಯನಂಗಳು ಶಾಂತಮಾಗಲ್ ॥
(ನೋಡಿ ಅಂಜಿ)
ಯೋಗೀಶ್ವರೀ ಜವದಲೊಯ್ವಳು ಮಿತ್ರನನ್ನೀ ।
(ವಿಚಾರಿಸಿ)
ಯೋಗಪ್ರಭಾವದಿಯಗಾಧ ಬಲಾನ್ವಿತಳ್ ತಾ ॥ ೫೪ ॥

(ತರ್ಕವಾಡಿ) ಇದರ ಅರ್ಥವೇನು ನನಗೇನೂ ತಿಳಿಯಲೊಲ್ಲದು. ಹುಚ್ಚ
ನಂತೆ ನನ್ನ ಸ್ಥಿತಿಯಾಗಿದೆ. ಮತ್ತೆ—

॥ ಚಂಪಕಮಾಲಾ ॥

ಮೊದಲೊಳಗಾಧ ಭ್ರಾಂತಿಯೊಳು ಪೂರ್ವದನರ್ಥಗಳಿನ್ನು ಮಾಜದೆ
ಕುದಿಯುತಲಿರ್ದವಾಗ ಪೊಸಭೀತಿಯು ನಮ್ಮನು ದಣ್ಣಮಾಡಿತೂ
ಜಿನರಿಕೆ ನಮ್ಮನೊಂದುಕ್ಷಣ ಬಿಟ್ಟಿತು ಮತ್ತ ಮದೀಗ ಬಂದಿತು ।
ಮುದವನು ಶೋಕವಂ ಮನಸು ಭೋಗಿಸುತಿರ್ಪುದಿದೆಂತು
ಸೋಜಿಗಂ ॥ ೫೫

ಇಲ್ಲಿ ಈ ಅರಣ್ಯದ ಕೊನೆಯಲ್ಲಿರುವ ನಮ್ಮೆಲ್ಲ ಆಪ್ತರನ್ನು ಕೂ
ಕೊಂಡು ಇಲ್ಲಿ ಕಾಮುಂದಕೀ ದೇವಿಯವರನ್ನು ಶೋಧಿಸಿ ಈ ಎಲ್ಲ ಸಂಗ
ಯನ್ನು ಅವರಿಗೆ ನಿವೇದಿಸುವೆನು.

(ಹೀಗೆಂದು ಹೋಗುತ್ತಾನೆ.)

**ಒಂಭತ್ತನೆಯ ಅಂಕ ಮುಗಿಯಿತು.**

---

# ೧೦ನೆಯ ಅಂಕ.

(ಕಾಮಂದಕಿಯೂ, ಮದಯಂತಿಕೆಯೂ, ಲವಂಗಿಕೆಯೂ, ಪ್ರವೇಶಿಸುತ್ತಾರೆ).

ಕಾಮಂದಕಿ— ( ದೀನಸ್ವರದಿಂದ ಕಣ್ಣಿಗೆ ನೀರುತಂದು ) ಅಯ್ಯೋ ಕೂಸೇ ಮಾಲತೀ ನನ್ನ ತೊಡೆಗೆ ಶೋಭೆಯನ್ನಿತ್ತ ಮಗಳೇ ಎಲ್ಲಿರುವಿ ? ನನ್ನ ಕೂಡ ಮಾತಾಡು.

॥ ಮಂದಾಕ್ರಾಂತ ॥

ಬಾಲೇ ನೀ ಚಿಕ್ಕ ಮಗುವಿರುವಾ ಕಾಲಕಾಲಕ್ಕೆ ತೋರಿ ।
ದಿರ್ಪ ಲೀಲಾಚೇಷ್ಟಿತಗಳೆಮಗೀಕಾಲದೊಳ್ ಮುಂದೆ ನಿಂತಿ ॥
ದಿರ್ಪ ಲೋಲಾಂಗಂಗಳ ಸ್ಮೃತಿಯೊಳೆನ್ನಂಗಗಳ್ ದಗ್ಧವಾಗಿ ।
ರ್ದಿಲ್ಲೆನ್ನೊಳ್ ಶಾಂತಿಯು ಹೃದಯುವಿಬ್ಭಾಗವಾಗಿರ್ಪುದೀಗಳ್ ॥ ೧ ॥

ಮತ್ತೆ ಮಗಳೇ—

॥ ಮಂದಾಕ್ರಾಂತ

ಕೂಸೇ ನೀರೋಧಿಸಿ ಚಣದೊಳೇ ನಕ್ಕು ನಮ್ಮಲ್ಲಿ ತೋರಿ ।
ದಿರ್ಪ ಸೌಂದರ್ಯಾನ್ವಿತ ವೊಳಿಕೆ ಜಂತಂಗಳಿಂ ಶೋಭಿಸುತ್ತಿ ॥
ದಿರ್ಪ ಸೊಂಪೇರಿರ್ಪ ಕಮಲವಂಬಿಂ ಮುಂದೆ ನಿಂತಿರ್ದು ನನ್ನೊಳ್ ।
ತೋಷಂ ತೋರಿರ್ದಿತು ತಡೆವುತಾಡಿರ್ದ ಶಬ್ದಂಗಳಿಂ ಮೇಣ್ ॥ ೨ ॥

ಉಳಿದವರು — (ಕಣ್ಣಿಗೆ ನೀರುತಂದು) ಎಲೈ ಗೆಳತಿಯೇ, ಸುಪ್ರಸನ್ನ ಚಂದ್ರ ಮುಖಿಯೇ ಎಲ್ಲಿ ಹೋದೆ ನೀನೊಬ್ಬಳೇ, ದುರ್ದೈವದ ಕೈಯ್ಯಲ್ಲಿ ಸಿಕ್ಕಿರುವಿ. ನಿನ್ನ ದೇಹದ ಗತಿ ಏನಾಗಿರಬಹುದು. ಎಲೈ ಭಾಗ್ಯವಂತನಾದ ಮಾಧವನೇ. ನಿನ್ನ ಆಯುಷ್ಯದಲ್ಲಿಯ ಉತ್ಸವವು ಉದಯವಾಗಿ ಮತ್ತೆ ಕೂಡಲೇ ಅಸ್ತವಾಯಿತು.

ಕಾಮಂದಕೀ —(ಬಹಳ ದುಃಖದಿಂದ) ಅಯ್ಯೋ ನನ್ನ ಕೂಸುಗಳೇ—

॥ ಕಂದ ॥

ತರುಣರಿವರೊಳಿರುವ ಮನೋ ।
ಹರಪ್ರೇಮವ ನೋಡುತೆಲ್ಲಿರಾನಂದಬಡಲ್ ॥

ಮರುತನು ಭರದಿಂ ಬಂದತಿ ।
ತ್ವರೆಯಿಂ ಕೂಡಿರ್ದವಲ್ಲಿ ತರುಗಳ ಸೊಬ್ಬುಂ ॥ ೩

ಲವಂಗಿಕೆ— (ಆವೇಶದಿಂದ) ಎಲೆ ವಜ್ರದಂತೆ ಕಠಿಣವಾದ ದುರ್ದೈವಿ ಹೃದಯವೇ, ನೀನು ಬಲು ಕೆಟ್ಟದ್ದಿರುತ್ತೀ. (ಹೀಗೆ ಎದೆಎದೆ ಬಡಕೊಂಡು ಬೀಳುವಳು)

ಮದಯಂತಿಕೆ—ಗೆಳತೀ ಲವಂಗಿಕೆ-ಕ್ಷಣಹೊತ್ತಾದರೂ ಸಮಾಧಾನ ಹಿಡಿ ನನ್ನ ಮಾತು ಕೇಳು.

ಲವಂಗಿಕೆ—ಮದಯಂತಿಕೆ-ಏನು ಮಾಡಲಿ ವಜ್ರಲೇಪದಿಂದ ಗಟ್ಟಿಯಾಗಿ ಬಿಗಿದಂತೆ ನನ್ನ ಜೀವವು ನನ್ನನ್ನು ಬಿಡಲೊಲ್ಲದು-

ಕಾಮಂದಕಿ—ಮಗಳೇ ಮಾಲತಿ, ಹುಟ್ಟಿದಾರಭ್ಯ ಲವಂಗಿಕೆಯು ನಿನ್ನ ಜೀವದ ಗೆಳತಿಯು. ಅವಳು ಜೀವ ಕೊಡುತ್ತಿರುವವನ್ನು ಕಂಡು ನಿನಗೆ ಕನಿಕರ ಹುಟ್ಟಲೊಲ್ಲದೇ. ಇವಳು--

॥ ಕಂದ ॥

ಪ್ರೇಮದಿ ನಿನ್ನೊಳುರತಳಿವ ।
ಳೀಮನಸೋತಿರ್ದ ನಿನ್ನ ಗೆಳತಿಯನುಳಿಸಾ ॥
ನಿಮ್ಮಯ ಗೆಳತಿಯ ನೋಡಾ ।
ನೀ ಮರೆಯಾಗಿರಲು ಮಂಕ ಮುಸಕಿರ್ದಸೊಡರ್ ॥ ೪ ॥

ಮುದ್ದುಮಗಳೇ, ನೀನು ಕಾಮಂದಕಿಯನ್ನು ಹೇಗೆ ಬಿಡುವಿ? ನಿರ್ದಯಳೇ ನನ್ನ ಕಾವಿಯ ವಸ್ತ್ರಗಳ ಮೇಲೆ ನೀನು ದೊಡ್ಡವಳಾದಿ.

॥ ಚಂಪಕಮಾಲಾ ॥

ಮಾಲೆಯನು ಬಿಟ್ಟ ಮೇಲೆ ಮುವದಿಂ ನಲಿದಾಡಿದಿ ಹಸ್ತದಂತಿಯೋಳ್ ।
ಕಲೆಯನು ಬಲ್ಲನಂ ಕೊರೆದ ಬೊಂಬೆಯ ಶೋಭೆಯ ಪೊತ್ತ ಮಾಲತೀ ।
ಕಲಿಸುತಲೆಲ್ಲ ವಿದ್ಯೆಗಳ ನಿನ್ನನು ನಾ ಬೆಳೆಸಿರ್ದೆ ಲೋಕದೋಳ್ ।
ಬಲು ಗುಣಯುಕ್ತನೆಂದು ಪೆಸರಂ ಪಡೆದಾತನೊಳಿತ್ತೆ ನಿನ್ನನು ॥ ೫ ॥

(ದುಃಖದಿಂದ) ಎಲೆ ಇಂದುವದನೆ ಈಗ ನಿನ್ನಾಕೆಯನ್ನು ಬಿಟ್ಟಂತಾಯಿತು.

॥ ಮಂದಾಕ್ರಾಂತ ॥

ಬಾಲೇ ನಿನ್ನೋಳ್ ಮುದದಿ ತೊಡೆಯೋಳ್ ನಿದ್ರಿಸುತ್ತಿರ್ಪನಂ ಮೇಣ್ ।
ಪಾಲಂ ಸ್ತನ್ಯಸ್ಥಳದಿ ಕುಡಿವಂ ಸಾಸಿವೀತಳ್ಳನಂ ಕೇಳ್ ॥

ಲೋಲಂವಕ್ತ್ರಂ ನಗುತಿರುವದಂ ಕಾರಣಂ ತೋಗದಿರ್ದಿ। ।
ಕಾಲಂ ಸನ್ನೊಳ್ಳಿರುಗಿರಲು ನಾ ಮಾಲತೀ ನೋಡಲಿಲ್ಲಾ ॥ ೬ ॥

ಲವಂಗಿಕೆ—ದೇವಿ! ಶಾಂತಳಾಗು. ಜೀವದ ತಾಪವನ್ನು ತಾಳಲಾರೆನು. ಈ ಗುಡ್ಡದ ಬದಿಯಿಂದ ಹಾರಿಕೊಂಡು ಒಮ್ಮೆ ನಿಶ್ಚಿಂತಳಾಗುವೆನು. ಆದ್ದ ರಿಂದ ಜನ್ಮಜನ್ಮಾಂತರಗಳಲ್ಲಿಯಾದರೂ ಗೆಳತಿಯನ್ನು ಕಾಣುವಂತೆ ಆಶೀರ್ವಾದ ಕೊಡು.

ಕಾಮುಂದಕಿ—ಲವಂಗಿಕೆಯೇ! ಕೇಳು. ಕಾಮಂದಕಿಯಾದರೂ ಮಗಳನ್ನು ಕಳಕೊಂಡು ಇನ್ನು ಜೀವದಿಂದುಳಿಯುವದಿಲ್ಲ ಈ ದುಃಖದ ಬಾಧೆಯು ನಮಗಿ ಬ್ಬರಿಗೂ ಸರಿಯಾಗಿಯೇ ಇರುವದು ಮತ್ತು —

॥ ಕಂದ ॥

ಮಾಲತಿಯನು ನಾ ಮುಂದಿನ ।
ಕಾಲದಿ ಕಾಣುವದಸಾಧ್ಯವಾದರು ಮರಣಂ ॥
ಲಾಲಿಸುತೆನ್ನಯ ಬಯಕೆಯು ।
ಲೀಲೆಯೊಳಳಿಯುತ್ತ ಖೇದವನು ಶಮಿಸುವದೌ ॥ ೭ ॥

ಲವಂಗಿಕೆ—ತಮ್ಮಪ್ಪಣೆಯಾದಂತೆ ( ಏಳುತ್ತಾಳೆ )

ಕಾಮುಂದಕಿ – (ಅಂತಃಕರುಣದಿಂದ ನೋಡಿ) ಮಗಳೇ ಮದಯಂತಿಕೇ!

ಮದಯಂತಿಕೆ—ಏನಪ್ಪಣೆ? ಮುಂದಾಗೆನ್ನುವಿರೋ, ಇಕೋ ನೋಡಿರಿ ಮುಂದಾದೆನು.

ಲವಂಗಿಕೆ— ಗೆಳತೀ ತಾಳು, ತಾಳು. ಈ ಆತ್ಮಹತ್ಯವನ್ನು ಬಿಡು. ನನ್ನನ್ನು ಮರೆಯಬೇಡ.

ಮದಯಂತಿಕೆ—(ಸಿಟ್ಟಿಗೆದ್ದು) ಹೋಗು, ನಾನೇನು ನಿನ್ನ ಅಂಕಿತದವಳಲ್ಲ.

ಕಾಮುಂದಕಿ—ಈ ಶಟವಿಯು ನಿಶ್ಚಯವನ್ನೇ ಮಾಡಿರುವಳು.

ಮದಯಂತಿಕೆ—( ತನ್ನಷ್ಟಕ್ಕೆ ) ಪ್ರಾಣನಾಥನಾದ ಮಕರಂದನೇ ನಿನಗೆ ನಮಸ್ಕಾರ.

ಲವಂಗಿಕೆ—ದೇವೀ, ಇದೇ ಮಧುಮತೀ ನದಿಯನ್ನು, ಒಡ್ಯಾಣವನ್ನು ಮಾಡಿಕೊಂಡಿರುವ ಪರ್ವತದ ಶಿಖರವು.

ಕಾಮಂದಕಿ: — ಸುಮ್ಮನೇ ಹೊತ್ತುಗಳಿಯಬೇಡಿರಿ.

( ಎಲ್ಲರೂ ಬೀಳಲಿಕ್ಕೆ ಸಿದ್ಧರಾಗುತ್ತಾರೆ ).

( ತೆರೆಯಲ್ಲಿ )

ಇದೇನಾಶ್ಚರ್ಯವು.

॥ ವಸಂತತಿಲಕ ॥

ಕಗ್ಗತ್ತಲೊಳ್ ಬೆಳಗಿಪ ಮಿಂಚನು ಕಂಡಪ್ರೋಲ್ ಕಣ್ ।
ಕುಗ್ಗುತ್ತಲೆಮ್ಮೊಳು ಪುನಃಶಮುಮಾನಸಾಗಲ್ ॥

ಕಾಮಂದಕಿ — (ಆಶ್ಚರ್ಯ ಮತ್ತು ಹರುಷದಿಂದ)

ಹಿಗ್ಗಿರ್ಪಳೀಗ ಮಕರಂದನ ಕಂಡಿದೇಂ ಪೇಳ್ ;

ಮಕರಂದ — (ಪ್ರವೇಶಮಾಡಿ)

ಜಗ್ಗಂದು ತೋರಿದಳು ಯೋಗಿನಿ ತೇಜವಂ ತಾ ॥ ೮

( ತೆರೆಯಲ್ಲಿ )

ಏನು ಭಯಂಕರ ಗೊಂದಲವಿದು ಎಷ್ಟು ಜನರು ಕೂಡಿರುವರು.

॥ ಹರಿಣಿ ॥

ಅಳಿದಿಹಳು ಮಾಲತ್ಯಂಬೀ ವಾರ್ತೆಯಂ ತಿಳಿಯುತ್ತೆ ತಾ ।
ಬಳಿಕಳಿಯುತಾ—ಶಾಜೀವಾತ್ಮಂಗಳೊಳ್ ರತಿಯನ್ನು ಮ ।
ತ್ತುಳಿಯಲಸುವಂ ಮಂತ್ರಿ ಶ್ರೇಷ್ಠಂ ಸುವರ್ಣದಬಿಂದುವ ।
ನ್ನಿಳಿಯುತಿರುವಂ ಮಾಡಲ್ಕಗ್ನಿ ಪ್ರವೇಶವ ಕೆಟ್ಟೆವೈ ॥ ೯

ಮದಯಂತಿಕೆ ಮತ್ತು ಲವಂಗಿಕೆ — ಒಮ್ಮೆಲೇ ಮಾಲತೀ ಮಾಧವ
ದರ್ಶನದ ಆನಂದದ ಸುದ್ದಿ ! ಮತ್ತು ಅದೇ ಕ್ಷಣದಲ್ಲಿ ಈ ಅನರ್ಥವು !

ಕಾಮಂದಕಿ ಮತ್ತು ಮಕರಂದನು — ಅಹ—ಎಂಥ ಕಷ್ಟವು. ಇದೇನಾಶ್ಚ
ರ್ಯವು.

॥ ವಸಂತತಿಲಕ ॥

ಏನೇನ್ನಲೀಗಿದಕೆ ನಾನತಿ ದಾರುಣಾಂ ಶ ।
ಸ್ತ್ರಂ ನಮ್ಮ ಮೇಲಿಹುದು ಚಂದನವನ್ನು ಕೂಡಿ ।
ದಿಗ್ನಿಗ ವಹ್ನಿಯೊಳು ವೃಷ್ಟಿಯನಮೃತಂ ಮೇಣ್ ।
ತಾನೀಗತೋರ್ದುದಿದು ಮೋಡಗಳಿಲ್ಲವಿಲ್ಲಿ ॥ ೧೦

॥ ಮತ್ತೇಭವಿಕ್ರೀಡಿತಂ ॥

ವಿಷದೊಳ್ಕೂಡಿರುವಮೃತಂ ಬೆಳಕಿನೊಳ್ ಕೂಡಿರ್ದ ಕತ್ತಲಂ ।
ಅಶನೀಮಿಶ್ರಿತ ಚಂದ್ರಮಂ ಬೆಳಗಿದಂತಾಗಿರ್ಪುದೀ ಕಾಲದೊಳ್ ।
ಅಸಮವೃಷ್ಟಿಯು ನೆಪ್ಪೊಳಿಕ್ಕುತಿಹುದೀಗಳ್ ದೈವ ಮತ್ತಲ್ಲಿಯೇ ।
ಶಶಿಮೌಳೀಕೃಪೆ ತೋರುತಿರ್ಪುದದರೊಳ್ ಪೇಳ್ವಲ್ಲರಾಭಾಗ್ಯಮಂ ॥೧೧॥

(ತೆರೆಯಲ್ಲಿ)

ಅಯ್ಯೋ ತಾತನೇ, ಬಿಡು, ಬಿಡು, ನಿನ್ನ ಮುಖಕಮಲವನ್ನು ನೋಡಲಿಕ್ಕೆ ಹಾತೊರೆಯುತ್ತಿರುವೆನು. ಶಾಂತನಾಗು ನನ್ನನ್ನಾದರಿಸು. ನಿನ್ನ ಜೀವವೆಂದರೆ ಈ ಲೋಕಕ್ಕೂ ಸ್ವರ್ಗಕ್ಕೂ ಮಧ್ಯದಲ್ಲಿ ನಿರ್ಮಲವಾದ ಶುಭದಾಯಕ ದೀಪದಂತಿರುವದು. ಅದನ್ನು ನನ್ನ ದೆಶೆಯಿಂದ ಅಳಿಯಲು ಸಿದ್ಧನಾಗಿರುವಿಯೊ? ನಿರ್ಲಜ್ಜಳೂ ನಿರ್ದಯಳೂ ಆದ ನಾನು ನಿಮ್ಮೆಲ್ಲರನ್ನು ಬಿಟ್ಟಿರುವೆನು.

ಕಾಮಂದಕಿ—ಅಯ್ಯೋ ಮಗಳೇ ಮಾಲತಿ—

॥ ವಸಂತತಿಲಕ ॥

ನೀ ಮತ್ತೆ ಪುಟ್ಟಿರುವವೋಲ್ ಬಹು ಕಷ್ಟದಿಂ ಬಂ ।
ದೆಮ್ಮೆಲ್ಲದುಃಖಗಳ ನೀಗಳಿದಿರ್ದ ಕಾಲ ।
ಕ್ಷೇಮಂದ ಭಾಗ್ಯ ನಡೆತಂದೊಡಗೂಡಿತಯ್ಯೋ ।
ನಮ್ಮನ್ನು ರಾಹು ಶಶಿಯಂ ಮುಸುಕಿರ್ದ ತೆರದಿಂ ॥ ೧೨ ॥

ಎಲ್ಲರು—ಅಯ್ಯೋ ಪ್ರೀತಿಯು ಗೆಳತಿಯೇ.

(ಮೋಹಹೊಂದಿದ ಮಾಲತಿಯನ್ನು ಹಿಡುಕೊಂಡು ಮಾಧವನು ಬರುತ್ತಾನೆ).

ಮಾಧವ—ಅಯ್ಯೋ ಕಷ್ಟವೇ —

॥ ಚಂಪಕಮಾಲಾ ॥

ಪಥದೊಳು ಶ್ರಾಂತಳಾಗಿರಲು ದೇಹದ ತಾಪವನೀಕೆ ತಾಳಿದಳ್ ।
ವ್ಯಥೆಯುಮಳನ್ನು ಜೀರೆ ತರದಿಂದಲೆ ಪೀಡಿಸುತಿರ್ಪುದೀಗಲೀ ।
ಗತಿಯನು ದೈವ ತಾನೆ ತರುತಿರ್ಪುದು ಕರ್ಮದಭೋಗವೆಂದು ತೋ ।
ರುತಲಿದನೀಗಲಾರು ಪರಿವರ್ತಿಸಲಾರರು ದುರ್ವಿಪಾಕಮಂ ॥ ೧೩ ॥

ಮಕರಂದ—ಗೆಳೆಯನೇ ಈಗ ಆ ಯೋಗಿನಿಯು ಎಲ್ಲಿರುವಳು?

ಮಾಧವ—

॥ ಇಂದ್ರವಂಶಂ ॥

ನಾ ನೀಗಲಾ ಯೋಗಿನಿಯನ್ನು ಕೂಡಿಕೊಂ ।
ಡೀ ಸೀಲಶ್ರೀ-ಪರ್ವತದಿಂ ಬರುತ್ತಿರಲ್ ।
ಜ್ಞಾನಾನ್ವಿತಳ್ ಕೇಳ್ವವನೇಚರಂಗಳಿಂ ।
ತಾನಾಗಿ ದಿನೋಕ್ತಿಗಳನ್ನು ಪೋಗಿಹಳ್ ॥ ೧

ಕಾಮಂದಕೀ ಮಕರಂಗರು—ಸಂಪನ್ನಳೇ ಮತ್ತೆ ನಮ್ಮನ್ನು ಕಾಪಾ ಏನುಕಾರಣ ಅದೃಶ್ಯಳಾದಿ.

ಮದಯಂತಿಕಾ ಲವಂಗಿಕೆಯರು——ಗೆಳತೀ ಮಾಲತೀ, ಏನೇ ಗೆ

ಮಾಲತಿ (ನಡಗುತ್ತ) ದೇವೀ ನಮ್ಮನ್ನು ಉಳಿಸು. ಬಹಳ ಹೊತ್ತಿನವರೆಗೆ ಉ ರುಗಟ್ಟಿದ್ದು ಅವಳ ಎದೆಯು ಹಾರಲೊಲ್ಲನು. ಅಯ್ಯೋ ಮಂತ್ರಿ ಶ್ರೇಷ್ಠ ಅಯ್ಯೋ ಪ್ರೀತಿಯ ಗೆಳತೀ ಒಬ್ಬರಿಗೊಬ್ಬರು ಮರಣಕ್ಕೆ ಕಾರಣರಾದಿರಿ.

ಕಾಮಂದಕೀ—ಅಯ್ಯೋ ಮಗಳೇ ಮಾಲತಿ.

ಮಾಧವ—ಅಯ್ಯೋ ಪ್ರಾಣಪ್ರಿಯೇ ಮಾಲತಿ

ಮಕರಂದ——ಅಯ್ಯೋ ತಂಗೀ ಮಾಲತಿ

( ಎಲ್ಲರೂ ಮೂರ್ಛೆಹೊಂದಿ ಮತ್ತೆ ಸ್ಮೃತಿ ಹೊಂದುವರು )

ಕಾಮಂದಕೀ——ಇದೇನು ! ನೋಡವು ಒಮ್ಮಿಂದೊಮ್ಮೆ ಹರಿವಂತ ಎಡೆಬಿಡದೆ ನೀರು ಸುರಿದು ನಮ್ಮನ್ನು ಆನಂದಗೊಳಿಸುವದು.

ಮಾಧವ—— ( ಆನಂದದಿಂದ ) ಮಾಲತಿಯು ಮತ್ತೆ ಎಚ್ಚತ್ತಂತಾಯಿ ಯಾಕಂದರೆ—

॥ ಚಂಪಕಮಾಲಾ ॥

ಕುಚಗಳು ಹಾರುತಿರ್ದು ಯದೆಯೊಳುಸುಗೀಗತಿ ಮುಕ್ತಮಾಗಿರಲ್ ।
ಶುಚಿಯುತ ಕಣ್ಗಳೀಗ ಹೊಳೆಯುತ್ತಿವೆ ಪ್ರೇಮದಿ ಪೂರ್ವದಂತೆಯೇ ।
ರುಚಿರ ಮನೋಹರಂ ಮುಖವು ಚೇತನದಿಂ ಬೆಳಗಾದ ಜಾವಿನೋಳ್ ।
ರುಚಿಯನು ತಳ್ತವಾರಿಜದ ಶೋಭೆಯ ಪೊತ್ತಿಹುದೀಗ ನೋದದಿಂ ॥

( ತೆರೆಯಲ್ಲಿ )

॥ ಮತ್ತೇಭವಿಕ್ರೀಡಿತಂ ॥

ವಿಷದೊಳ್ಕೂಡಿರುವಮೃತಂ ಬೆಳಕಿನೊಳ್ ಕೂಡಿರ್ದ ಕತ್ತಲಂ ।
ಅಶನೀಮಿಶ್ರಿತ ಚಂದ್ರಮಂ ಬೆಳಗಿದಂತಾಗಿರ್ಪುದೀ ಕಾಲದೊಳ್ ।
ಅಸಮದೃಷ್ಟಿಯು ಸೇರ್ದೊಮ್ಮೆಗಿಕ್ಕುತಿಹುದೀಗಳ್ ದೈವ ಮತ್ತಲ್ಲಿಯೇ ।
ಶಶಿಮೌಳೀಕೃಪೆ ತೋರುತಿರ್ಪುದದರೊಳ್ ಪೇಳ್ವಲ್ಲರಾಭಾಗ್ಯಮಂ ॥ ೧೧ ॥

( ಕೆರೆಯಲ್ಲಿ )

ಅಯ್ಯೋ ತಾತನೇ, ಬಿಡು, ಬಿಡು, ನಿನ್ನ ಮುಖಕಮಲವನ್ನು ನೋಡಲಿಕ್ಕೆ ಹಾತೊರೆಯುತ್ತಿರುವೆನು. ಶಾಂತನಾಗು ನನ್ನನ್ನಾದರಿಸು. ನಿನ್ನ ಜೀವವೆಂದರೆ ಈ ಲೋಕಕ್ಕೂ ಸ್ವರ್ಗಕ್ಕೂ ಮಧ್ಯದಲ್ಲಿ ನಿರ್ಮಲವಾದ ಶುಭದಾಯಕ ದೀಪದಂತಿರುವದು. ಅದನ್ನು ನನ್ನ ದೆಶೆಯಿಂದ ಅಳಿಯಲು ಸಿದ್ಧನಾಗಿರುವಿಯೊ? ನಿರ್ಲಜ್ಜಳೂ ನಿರ್ದಯಳೂ ಆದ ನಾನು ನಿಮ್ಮೆಲ್ಲರನ್ನು ಬಿಟ್ಟಿರುವೆನು.

ಕಾಮಂದಕಿ—ಅಯ್ಯೋ ಮಗಳೇ ಮಾಲತಿ—

॥ ವಸಂತತಿಲಕ ॥

ನೀ ಮತ್ತೆ ಪುಟ್ಟಿರುವವೋಲ್ ಬಹು ಕಷ್ಟದಿಂ ಬಂ ।
ದೆಮ್ಮೆಲ್ಲದುಃಖಗಳ ನೀಗಳಿದಿರ್ದ ಕಾಲ ।
ಕ್ಕೀಮಂದಭಾಗ್ಯ ನಡೆತಂದೊಡಗೂಡಿತಯ್ಯೋ ।
ನಮ್ಮನ್ನು ರಾಹು ಶಶಿಯಂ ಮುಸುಕಿರ್ದ ತೆರದಿಂ ॥ ೧೨ ॥

ಎಲ್ಲರು—ಅಯ್ಯೋ ಪ್ರೀತಿಯ ಗೆಳತಿಯೇ.

(ಮೋಹಹೊಂದಿದ ಮಾಲತಿಯನ್ನು ಹಿಡುಕೊಂಡು ಮಾಧವನು ಬರುತ್ತಾನೆ).

ಮಾಧವ—ಅಯ್ಯೋ ಕಷ್ಟವೇ—

॥ ಚಂಪಕಮಾಲಾ ॥

ಪಥದೊಳು ಶ್ರಾಂತಳಾಗಿರಲು ದೇಹದ ತಾಪವನೀಕೆ ತಾಳಿದಳ್ ।
ವ್ಯಥೆಯುಮಳನ್ನು ಜೇರಿ ತರದಿಂದಲೆ ಪೀಡಿಸುತಿರ್ಪುದೀಗಲೀ ।
ಗತಿಯನು ದೈವ ತಾನೆ ತರುತಿರ್ಪುದು ಕರ್ಮದಭೋಗವೆಂದು ತೋ ।
ರುತಲಿದನೀಗಲಾರು ಪರಿವರ್ತಿಸಲಾರರು ದುರ್ವಿಪಾಕಮಂ ॥ ೧೩ ॥

ಮಕರಂದ—ಗೆಳೆಯನೇ ಈಗ ಆ ಯೋಗಿನಿಯು ಎಲ್ಲಿರುವಳು?

ಮಾಧವ—

॥ ಇಂದ್ರವಂಶಂ ॥

ನಾ ನೀಗಲಾ ಯೋಗಿನಿಯನ್ನು ಕೂಡಿಕೊಂ ।
ಡೀ ಸ್ಸೀಲಶ್ರೀ-ಪರ್ವತದಿಂ ಬರುತ್ತಿರಲ್ ।
ಜ್ಞಾನಾನ್ವಿತಳ್ ಕೇಳ್ದುವನೇಚರಂಗಳಿಂ ।
ತಾನಾಗಿ ದಿನೋಕ್ತಿಗಳನ್ನು ಪೋಗಿಹಳ್ ॥ ೧೪

ಕಾಮಂದಕೀ ಮಕರಂಗರು—ಸಂಪನ್ನಳೇ ಮತ್ತೆ ನನ್ನನ್ನು ಕಾಪಾಡ
ಏನುಕಾರಣ ಅದೃಶ್ಯಳಾದಿ.

ಮದಯಂತಿಕಾ ಲವಂಗಿಕೆಯರು—ಗೆಳತೀ ಮಾಲತೀ, ಏನೇ ಗೆ
ಮಾಲತಿ (ನಡಗುತ್ತ) ದೇವೀ ನನ್ನನ್ನು ಉಳಿಸು- ಬಹಳ ಹೊತ್ತಿನವರೆಗೆ ಉ
ರುಗಟ್ಟಿದ್ದು ಅವಳ ಎದೆಯು ಹಾರಲೊಲ್ಲದು. ಅಯ್ಯೋ ಮಂತ್ರಿ ಶ್ರೇಷ್ಠ
ಅಯ್ಯೋ ಪ್ರೀತಿಯ ಗೆಳತೀ ಒಬ್ಬರಿಗೊಬ್ಬರು ಮರಣಕ್ಕೆ ಕಾರಣರಾದಿರಿ.

ಕಾಮಂದಕೀ—ಅಯ್ಯೋ ಮಗಳೇ ಮಾಲತಿ.

ಮಾಧವ—ಅಯ್ಯೋ ಪ್ರಾಣಪ್ರಿಯೇ ಮಾಲತಿ

ಮಕರಂದ—ಅಯ್ಯೋ ತಂಗೀ ಮಾಲತಿ

( ಎಲ್ಲರೂ ಮೂರ್ಚ್ಛೆಹೊಂದಿ ಮತ್ತೆ ಸ್ಮೃತಿ ಹೋದುವರು )

ಕಾಮಂದಕೀ—ಇದೇನು ! ಮೋಡವು ಒಮ್ಮಿಂದೊಮ್ಮೆ ಹರಿವಂತ
ಎಡೆಬಿಡದೆ ನೀರು ಸುರಿದು ನನ್ನನ್ನು ಆನಂದಗೊಳಿಸುವದು.

ಮಾಧವ— ( ಆನಂದದಿಂದ ) ಮಾಲತಿಯು ಮತ್ತೆ ಎಚ್ಚತ್ತಂತಾಯಿತ
ಯಾಕಂದರೆ—

॥ ಚಂಪಕಮಾಲಾ ॥

ಕುಚಗಳು ಹಾರುತಿರ್ದು ಯದೆಯೋಳುಸುಗಿಗತಿ ಮುಕ್ತಮಾಗಿರಲ್ ।
ಶುಚಿಯುತ ಕಣ್ಗಳೀಗ ಹೊಳೆಯುತ್ತವೆ ಪ್ರೇಮದಿ ಪೂರ್ವದಂತೆಯೇ ।
ರುಚಿರ ಮನೋಹರಂ ಮುಖವು ಚೇತನದಿಂ ಬೆಳಗಾದ ಜಾವಿನೋಳ್ ।
ರುಚಿಯನು ತಳ್ದಪಾಂಜದ ಶೋಭೆಯ ಪೊತ್ತಿಹುದೀಗ ಮೋದದಿಂ ॥ ೧

( ತೆರೆಯಲ್ಲಿ )

॥ ಮಲ್ಲಿಕಾಮಾಲೆ ॥

ರಾಜನಂದನರೀರ್ವರಾತನ ಪಾದದೋಳ್ ನಮಿಸಿರ್ದುದಂ ।
ತೇಜಯುಕ್ತನು ಮಂತ್ರಿಶ್ರೇಷ್ಠನು ಲೆಕ್ಕದೋಳ್ತರದಗ್ನಿಯೋ ।
ಛಂಜದಾಹುತಿ ಯಾಗುತಿರ್ದನು ಕೇಳಿನನ್ನಯ ವಾಣಿಯಂ ।
ಮಾಜದೇಬೆರಗಾಗಿ ಹಿಂದಕೆ ನಿಂತನಾತನು ಕ್ಷೇಮದಿಂ ॥ ೧೬ ॥

ಮಾಧವ ಮಕರಂದರು——ದೇವೀಯವರೇ ಆನಂದವಾಯಿತೇ !

॥ ಮಾಲಿನಿ ॥

ಗಮನಿಸಿ ಜವದಿಂದಂ ಮೇಘನಂಭೇದಿಸಿರ್ಪಳ್ ।
ವಿಮಲಮುಹಿಮೆಯುಂ ತೋರಿರ್ಪಳೀ ಸಾಧ್ವಿನಮ್ಮೊಳ್ ।
ಅಮಲ ಸುಧೆಯ ಧಾರಾ ವೃಷ್ಟಿಯಂಬೀಸುವಾತರ್ಜ ।
ಗಮನವು ಜಲವಿಜಾಯುತ್ತಿರ್ಪ ಮೇಘಂಗೆಪೆತ್ತೌ ॥ ೧೭ ॥

ಕಾಮಂದಕೀ——ಒಳಿತಾಯಿತು.

ಮಾಲತಿ——ಬಹಳಹೊತ್ತಿನಮೇಲೆ ಜೀವಬಂತು.

ಕಾಮಂದಕಿ——( ಆನಂದಾಶ್ರುಗಳನ್ನು ಸುರಿಸಿ ) ಬಾ. ಮಗಳೇ ಬಾ.

ಮಾಲತಿ——'ಆಂ' ದೇವಿಯವರೇನು ( ನಮಸ್ಕಾರಮಾಡುವಳು )

ಕಾಮಂದಕೀ—( ಎಬ್ಬಿಸಿ ಅಪ್ಪಿಕೊಂಡು ಮುಂದಲೆಯನ್ನು ಮೂಸಿನೋಡಿ )

॥ ಸ್ವಾಗತಂ ॥

ಬಾಲೆ ಬಾಳೆಯುಸುಮೀಝುಲೆ ನಿನ್ನೀ ।
ಲೋಲಮಾಧವಗೆ ಬಾಂಧವ ವರ್ಗಂ ।
ಕಾಲನೋಳ್ಸಿಲುಕಿರಲ್ ಪೊರೆಯುತ್ತೀ ।
ಗೀ ಲವಂಗಿಯನು ನನ್ನನು ಕಾಯೌ ॥ ೧೮ ॥

ಮಾಧವ—ಮಿತ್ರ, ಮಕರಂದಾ, ಮಾಧವನ ಜೀವಿತವು ಈಗ ಸಾರ್ಥಕವಾಯಿತು.

ಮಕರಂದ—( ಆನಂದದಿಂದ ) ಹೌದು, ಹೌದು, ಹಾಗೆ ಸರಿ.

ಉಳಿದವರು——ಗೆಳತೀ ನಿನ್ನನ್ನು ಮತ್ತೆ ಕಂಡೇವೆಂದು ನಾವು ಕನಸು ಮನಸಿನಲ್ಲಿ ಸಹ ಎಣಿಸಿದ್ದಿಲ್ಲ. ನಮ್ಮನ್ನು ಬಿಗಿದಪ್ಪಿ ಆನಂದಕೊಡು.

ಮಾಲತಿ--ಅಹಾ, ನನ್ನ ಗೆಳತಿಯರೇ

( ಆಲಿಂಗಿಸುವಳು )

ಕಾಮಂದಕಿ--ಬಾಲಕರೆ ಇದೇನು.

ಮಾಧವ, ಮಕರಂದರು — ದೇವಿ

॥ ಕಂದ ॥

ಬೆಂದೆವು ಕಾಪಾಲಿಯುಸಿ ।
ಟ್ಟಂದೆಂಬುವ ಬೆಂಕಿಯಲ್ಲಿ ಸಂಕಟವೆಂಬೀ ।
ಬಂಧನದಿಂದೆಮ್ಮನು ತಾ ।
ಚಂದದಿ ಕಾದಿಹಳು ಸಾಧ್ವಿ ಮೋಚನಪಿತ್ರು ॥ ೧೯ ॥

ಕಾಮಂದಕೀ—ಏನು ಅಘೋರಘಂಟನ ವಧೆಯಿಂದಲೇ ಇದೆಲ್ಲ ಉದ್ಭವಿಸಿತೇ.

ಲವಂಗಿಕಾ ಮದಯಂತಿಕೆಯರು — ಏನಾಶ್ಚರ್ಯವಿದು ? ದೈವವು ಮೇಲಿಂದಮೇಲೆ ಆಪತ್ತಿಗಳನ್ನು ತಂದರೂ ಕೊನೆಗೆ ಪರಿಣಾಮವು ಸುಖಕರವಾಯಿತು.

ಸೌದಾಮಿನಿ—( ಪ್ರವೇಶಮಾಡಿ ) ಈ ನಿನ್ನ ಬಹಳ ದಿವಸದ ಶಿಷ್ಯಳು ವಂದಿಸುವಳು.

ಕಾಮಂದಕಿ--ಓಹೋ! ಕಲ್ಯಾಣಮಸ್ತು. ಸೌದಾಮಿನೀ.

ಮಾಧವ ಮಕರಂದರು--ಇದೇನು ಇವಳು ದೇವಿಯುವರ ಪ್ರೀತಿಗೆ ಪಾತ್ರಳಾದ ಆದ್ಯಶಿಷ್ಯಳೇ? ಅದರಿಂದಲೇ ಇದೆಲ್ಲ ಕೂಡಿಬಂತು.

॥ ವಸಂತತಿಲಕ ॥

ಬಾ ಬಾರೆ ಭೂರಿವಸುಜೀವಿತ ಪಿತೃದೇಪೀ ।
ಸಂಭಾರವನ್ನೆ ಧರಿಸಿರ್ಪಳೆ ಬೇಗ ನೀ ಬಾ ।
ಬಾ ಬಾಗದಿರ್ ನನಗೆ ನೀಬಿಗಿದಪ್ಪು ನನ್ನಂ ।
ನೀ ಬೀರು ಮೋದವನು ಕಾಯದೊಳೀಗ ನನ್ನೊಳ್ ॥ ೨೦ ॥

ಮತ್ತೆ—

॥ ಉತ್ಪಲಮಾಲಾ ॥

ಈಜಗದಲ್ಲಿ ಲೀಲೆಯೊಳು ಮಾಡುತಿಹೀಯುಪಕಾರ ಕೃತ್ಯಗಳ್ ।
ಸೋಜಿಗವನ್ನು ಪುಟ್ಟಿಸುತಲೆಲ್ಲ ಜನಂಗಳೊಳಿನ್ನು ನಿನ್ನನೂ ।

॥ ಮಲ್ಲಿಕಾಮಾಲೆ ॥

ರಾಜನಂದನರೀರ್ವರಾತನ ಪಾದದೋಳ್ ನಮಿಸಿರ್ದುದಂ ।
ತೇಜಯುಕ್ತನು ಮಂತ್ರಿಶ್ರೇಷ್ಟನು ಲೆಕ್ಕದೋಳ್ತರದಗ್ನಿಯೋ ।
ಳಂಜದಾಹುತಿ ಯಾಗುತಿರ್ದನು ಕೇಳಿನನ್ನಯ ವಾಣಿಯಂ ।
ಮಾಜದೇಬೆರಗಾಗಿ ಹಿಂದಕೆ ನಿಂತನಾತನು ಕ್ಷೇಮದಿಂ ॥ ೧೬ ॥

ಮಾಧವ ಮಕರಂದರು---ದೇವೀಯವರೇ ಆನಂದವಾಯಿತೇ !

॥ ಮಾಲಿನಿ ॥

ಗಮನಿಸಿ ಜವದಿಂದಂ ಮೇಘನಂಭೇದಿಸಿರ್ಪಳ್ ।
ವಿಮಲನುಹಿಮೆಯಂ ತೋರಿರ್ಪಳೀ ಸಾಧ್ವಿನಮ್ಮೊಳ್ ।
ಅಮಲ ಸುಧೆಯ ಧಾರಾ ವೃಷ್ಟಿಯಂಬೀಸುವಾತರ್ಗ ।
ಗಮನವು ಜಲವಿಹಾಯುತ್ತಿರ್ಪ ಮೇಘಂಗೆಪೆರ್ಚೌ ॥ ೧೭ ॥

ಕಾಮಂದಕೀ--ಒಳಿತಾಯಿತು.

ಮಾಲತಿ--ಬಹಳಹೊತ್ತಿನಮೇಲೆ ಜೀವಬಂತು.

ಕಾಮಂದಕಿ--( ಆನಂದಾಶ್ರುಗಳನ್ನು ಸುರಿಸಿ ) ಬಾ. ಮಗಳೇ ಬಾ.

ಮಾಲತಿ--'ಆಂ' ದೇವಿಯವರೇನು ( ನಮಸ್ಕಾರಮಾಡುವಳು )

ಕಾಮಂದಕೀ—( ಎಬ್ಬಿಸಿ ಅಪ್ಪಿಕೊಂಡು ಮುಂದಲಿಯನ್ನು ಮೂಸಿನೋಡಿ )

॥ ಸ್ವಾಗತಂ ॥

ಬಾಲೆ ಬಾಳೆಯುಸುಮೀಶುಲೆ ನಿನ್ನೀ ।
ಲೋಲಮಾಧವಗೆ ಬಾಂಧವ ವರ್ಗಂ ।
ಕಾಲನೋಳ್ಸಿಲುಕಿರಲ್ ಪೊರೆಯುತ್ತೀ ।
ಗೀ ಲವಂಗಿಯನು ನನ್ನನು ಕಾಯ್ದೌ ॥ ೧೮ ॥

ಮಾಧವ—ಮಿತ್ರಾ, ಮಕರಂದಾ, ಮಾಧವನ ಜೀವಿತವು ಈಗ ಸಾರ್ಥಕವಾಯಿತು.

ಮಕರಂದ—( ಆನಂದದಿಂದ ) ಹೌದು, ಹೌದು, ಹಾಗೆ ಸರಿ.

ಉಳಿದವರು--ಗೆಳತೀ ನಿನ್ನನ್ನು ಮತ್ತೆ ಕಂಡೇವೆಂದು ನಾವು ಕನಸು ಮನಸಿನಲ್ಲಿ ಸಹ ಎಣಿಸಿದ್ದಿಲ್ಲ. ನಮ್ಮನ್ನು ಬಿಗಿದಪ್ಪಿ ಆನಂದಕೊಡು.

ಮಾಲತಿ--ಅಹಾ, ನನ್ನ ಗೆಳತಿಯರೇ

( ಆಲಿಂಗಿಸುವಳು )

ಕಾಮಂದಕಿ--ಬಾಲಕರೆ ಇದೇನು.

ಮಾಧವ, ಮಕರಂದರು – ದೇವಿ

॥ ಕಂದ ॥

ಬೆಂದೆವು ಕಾಪಾಲಿಯುಸಿ ।
ಟ್ಟಂದೆಂಬುವ ಬೆಂಕಿಯಲ್ಲಿ ಸಂಕಟವೆಂಬೀ ।
ಬಂಧನದಿಂದೆನ್ನುನು ತಾ ।
ಚಂದದಿ ಕಾದಿಹಳು ಸಾಧ್ವಿ ಮೋಚನಪಿತ್ತು ॥ ೧೯ ॥

ಕಾಮಂದಕೀ—ಏನು ಆಘೋರಘಂಟನ ಪಥೆಯಿಂವಲೇ ಇದೆಲ್ಲ ಉದ್ಭವಿಸಿತೇ.

ಲವಂಗಿಕಾ ಮದಯಂತಿಕೆಯರು — ಏನಾಶ್ಚರ್ಯವಿದು ? ದೈವವು ಮೇಲಿಂದಮೇಲೆ ಆಪತ್ತಿಗಳನ್ನು ತಂದರೂ ಕೊನೆಗೆ ಪರಿಣಾಮವು ಸುಖಕರವಾಯಿತು.

ಸೌದಾಮಿನಿ—( ಪ್ರವೇಶಮಾಡಿ ) ಈ ನಿನ್ನ ಬಹಳ ದಿವಸದ ಶಿಷ್ಯಳು ವಂದಿಸುವಳು.

ಕಾಮಂದಕಿ--ಓಹೋ! ಕಲ್ಯಾಣಮಸ್ತು. ಸೌದಾಮಿನೀ.

ಮಾಧವ ಮಕರಂದರು--ಇದೇನು ಇವಳು ದೇವಿಯುವರ ಪ್ರೀತಿಗೆ ಪಾತ್ರಳಾದ ಆದ್ಯಶಿಷ್ಯಳೇ? ಅದರಿಂದಲೇ ಇದೆಲ್ಲ ಕೂಡಿಬಂತು.

॥ ವಸಂತತಿಲಕ ॥

ಬಾ ಬಾರೆ ಭೂರಿವಸುಜೀವಿತ ವಿತ್ತದೇಪೀ ।
ಸಂಭಾರವನ್ನೆ ಧರಿಸಿರ್ಪಳೆ ಬೇಗ ನೀ ಬಾ ।
ನಾ ಬಾಗದಿರ್ ನನಗೆ ನೀಬಿಗಿದಪ್ಪು ನನ್ನಂ ।
ನೀ ಬೀರು ಮೋದವನು ಕಾಯದೊಳೀಗ ನನ್ನೊಳ್ ॥ ೨೦ ॥

ಮತ್ತೆ—

॥ ಉತ್ಪಲಮಾಲಾ ॥

ನೀಜಗದಲ್ಲಿ ಲೀಲೆಯೊಳು ಮಾಡುತಿಹೀಯುಪಕಾರ ಕೃತ್ಯಗಳ್ ।
ಸೋಜಿಗವನ್ನು ಪುಟ್ಟಿಸುತಲಿಲ್ಲ ಜನಂಗಳೊಳಿನ್ನು ನಿನ್ನನೂ ।

ಪೂಜಯುಸ್ಥಾನಮಂ ಬಿಡದೆ ಮಾಡಿದವಾಗಿನ ಕಾಲದಲ್ಲಿನಾ ।
ಬೀಜನನೊಂದಕ್ಕೆ ಫಲನೋರಿತು ನಿನ್ನ ಸಹಾಯದಿಂದಲೇ ॥ ೨೧ ॥

ಮದಯಂತಿಕಾ ಲವಂಗಿಕೆಯರು— ಇವರೇ ಆ ಪೂಜ್ಯರಾದ ಸೌದಾಮಿನಿಯವರು.

ಮಾಲತೀ—ಹೌದು. ಇವರೇ ದೇವಿಯವರ ಪ್ರೇಮದ ಶಿಷ್ಯರು. ಇವರೇ ಕಪಾಲಕುಂಡಲಿಗೆ ಶಿಟ್ಟುಮಾಡಿ ನನ್ನನ್ನು ತಮ್ಮ ಬಿಡಾರಕ್ಕೆ ತಕ್ಕೊಂಡುಹೋಗಿ ಸಮಾಧಾನಗೊಳಿಸಿದರು. ಮತ್ತೆ ಗುರುತದ ಬಕುಲಮಾಲೆಯನ್ನು ಕೈಯ್ಯಲ್ಲಿ ತಕ್ಕೊಂಡು ಇಲ್ಲಿಗೆ ಬಂದು ನಿಮ್ಮೆಲ್ಲರನ್ನು ಉಳಿಸಿದರು.

ಉಳಿದ ಎಲ್ಲರೂ— ಸಣ್ಣದೇವಿಯವರು ನಮಗೆ ಪ್ರಸನ್ನರಾದರು.

ಮಕರಂದ ಮಾಧವರು— ಇದೇನಾಶ್ಚರ್ಯವು.

॥ ಕಂದ ॥

ಬೇಡಿದ ಬಯಕೆಯ ನೀಡಲು ।
ಬೇಡುವರೆಂದೆಣಿಸುತಿಹುದು ಚಿಂತಾಮಣಿ ತಾ ॥
ಬೇಡದೆನಮ್ಮೀ ಬಯಕೆಯ ।
ಕೂಡಿಸಿದರಿದಲ್ಲವೇನೆ ಸೌದಾಮಿನಿ ನೀ ॥ ೨೨ ॥

ಸೌದಾಮಿನಿ— (ತನ್ನಷ್ಟಕ್ಕೆ) ಇವರ ಸೌಜನ್ಯವನ್ನು ನೋಡಿ ನನಗೆ ನಾಚಿಕೆ ಬರುತ್ತದೆ. (ಎಲ್ಲರೂ ಕೇಳುವಂತೆ) ದೇವೀ ಆನಂದಭರಿತನಾದ ನಂದನನು ಪದ್ಮಾವತೀ ಪತಿಯನ್ನು ಅಭಿನಂದಿಸಲು ಅರಸರು ಭೂರಿವಸು ಮಂತ್ರಿಗಳ ಎದುರಿನಲ್ಲಿಯೇ ಬಾಲಕನಾದ ಮಾಧವನಿಗೆ ಈ ಪತ್ರ ಬರಿಸಿ ಕಳಿಸಿರುವರು. (ಪತ್ರವನ್ನು ಒಪ್ಪಿಸುವಳು)

ಕಾಮಂದಕೀ— (ತಕ್ಕೊಂಡು ಓದುವಳು) ನಿಮ್ಮಿಬ್ಬರಿಗೆ ದೇವರು ಕಲ್ಯಾಣ ಮಾಡಲಿ ಧೊರೆಗಳು ಅಪ್ಪಣೆಕೊಡಿಸುವದೇನಂದರೆ—

॥ ಚಂಪಕಮಾಲಾ ॥

ಗುಣಿಗಳೊಳುತ್ತಮಂಗೆ ಬಲು ಖ್ಯಾತಿಯ ಹೊಂದಿದವಂಗೆ ಮತ್ತೆ ಸಂ ।
ದಣಿಸಿದ ಸಂಕಟಂಗಳನು ದಾಟಿದ ನಿನ್ನಯ ಮಿತ್ರವರ್ಗಗೀ ॥

ಗುಣಿ ಮದಯಂತಿಯುಂ ಮುದದೊಳರ್ಪಿಸುತಿರ್ಪನು ಪ್ರೇಮದಿಂದೆ ಸಾ
ನಣುಗೆಯು ಪೂರ್ವದಲ್ಲಿಯವನಲ್ಲಿರಿಸಿರ್ಪಳು ಪ್ರೇಮವನ್ನು ತಾ ।೨೩।

( ಮಾಧವನ ಕಡಿಗೆ ನೋಡಿ ಆನಂದದಿಂದ )

ಬಾಲಕನೇ ಕೇಳು?

ಮಾಧವ— ಕೇಳಿದೆನು ಈಗ ಎಲ್ಲತರದಿಂದಲೂ ಕೃತಾರ್ಥನಾದೆನು.

ಮಾಲತಿ— ಇದೊಂದು ಸಂಶಯವೆಂಬ ಬಾಣವನ್ನು ಎದೆಯೊಳಗಿಂ
ಕಿತ್ತು ತೆಗೆದಂತಾಯಿತು.

ಲವಂಗಿಕೆ— ಈಗ ಮಾಧವನ ಯಾವತ್ತೂ ಆಶೆಗಳು ಏನೂ ಉಳಿಯ
ಪೂರ್ಣವಾದಂತಾಯಿತು.

ಮಕರಂದನು— (ಮುಂದೆನೋಡಿ) ಇದೇನು ಅವಲೋಕಿತೆಯೂ, ಬು
ರಕ್ಷಿತೆಯೂ, ಕಲಹಂಸನೂ ದೂರಿಂದಲೇ ನಾವೆಲ್ಲರು ಕೂಡಿದ್ದನ್ನು ನೋ
ಆನಂದದಿಂದ ಹಾರಾಡುತ್ತ ಇತ್ತಕಡಿಗೇ ಬರುತ್ತಿರುವರು.

( ಅವಲೋಕಿತೆಯೂ, ಬುದ್ಧರಕ್ಷಿತೆಯೂ, ಕಲಹಂಸನೂ, ಬರುತ್ತಾರೆ. )

ಅವರು— (ಆನಂದದಿಂದ ಕುಣಿದಾಡಿ, ಕಾಮಂದಕಿಯ ಸಮೀಪಕ್ಕೆ ಬಂದು ನಮಸ್ಕ
ಈ ಎಲ್ಲ ಕೆಲಸಗಳನ್ನು ಕೂಡಿಸಿಕೊಟ್ಟ ಕೌಶಲ್ಯದ ನಿಧಿಗಳೇ ನಿಮಗೆ ಜಯ
ನಲಿ! ಮಕರಂದನ ಮಿತ್ರನಾದ ಮಾಧವನೆಂಬ ಪೂರ್ಣಚಂದ್ರನೇ ನಿನಗೆ ಜ
ಜಯಕಾರ !

(ಎಲ್ಲರೂ ಕಿರಿನಗೆಯಿಂದ ನೋಡುತ್ತಾರೆ.)

ಲವಂಗಿಕೆ—ಅವನ ಯಾವತ್ತೂ ಕೆಲಸಗಳು ಇಂದಿಗೆ ಮುಗಿದಂತಾ
ಆದುದರಿಂದ ಆನಂದದಿಂದ ಕುಣಿಯುವರು.

ಕಾಮಂದಕಿ-- ಇದು ಮಾತ್ರ ನಿಜವು. ಇಂಥ ಅದ್ಭುತ, ವಿಚಿತ್ರ, ಮನ
ಹರ, ಮತ್ತು ತೇಜೋಮಯವಾದ ಸಂವಿಧಾನಕವು ಎಲ್ಲಿಯಾದರೂ ಉಂ

ಸೌದಾಮಿನಿ-- ಅಮಾತ್ಯರಾದ ಭೂರಿವಸು ಮತ್ತು ದೇವರಾತರು ತಮ್ಮ ತಮ್ಮ ಮಕ್ಕಳಲ್ಲಿ ಶರೀರಸಂಬಂಧ ಮಾಡಬೇಕೆಂದು ಮಾಡಿದ ಬಯಕೆಯು ಕಾಲಾಂತರದಿಂದಾದರೂ ಕಯ್ಗೂಡಿತು. ಇದೊಂದು ಬಲು ಆನಂದದ ಮಾತು.

ಮಾಲತಿ-- (ತನ್ನಷ್ಟಕ್ಕೆ) ಅದು ಹೇಗೆ?

ಮಕರಂದ ಮಾಧವರು-- (ಆಶ್ಚರ್ಯದಿಂದ) ದೇವೀ, ಮಾತಿನ ಅರ್ಥ ಒಂದು, ನಿಜವಾಗಿ ಘಟಿಸಿದ ಸಂಗತಿ ಮತ್ತೊಂದು,

ಲವಂಗಿಕೆ--(ಬದಿಗೆ) ದೇವೀ ಇದರ ಮೇಲಿಂದ ಏನು ತಿಳಕೊಳ್ಳತಕ್ಕದ್ದು.

ಕಾಮಂದಕಿ-- (ತನ್ನಷ್ಟಕ್ಕೆ) ಮದಯಂತಿಕೆಯ ಬಗ್ಗೆ ನಂದನನು ಏನಾದರು ಅಡ್ಡಿ ತಂದಾನೆಂಬ ಸಂಶಯವಂತೂ ದೂರಾಯಿತು. (ಕೇಳುವಂತೆ) ಮಕ್ಕಳಿರಾ, ಮಾತಿನ ಅರ್ಥ ಒಂದು ನಿಜವಾಗಿ ಘಟಿಸಿದ ಸಂಗತಿ ಮತ್ತೊಂದು ಎನ್ನ ಕೂಡದು. ಯಾಕಂದರೆ? ವಿದ್ಯಾರ್ಥಿದೆಶೆಯಲ್ಲಿದ್ದಾಗಲೇ ನಮ್ಮ ಸೌದಾಮಿನಿಯ ಎದುರಿನಲ್ಲಿಯೇ ಅವರಿಬ್ಬರು ಮಂತ್ರಿಗಳು ತಮ್ಮ ತಮ್ಮ ಮಕ್ಕಳಲ್ಲಿ ಶರೀರ ಸಂಬಂಧವನ್ನು ಮಾಡತಕ್ಕದ್ದೆಂದು ಪ್ರತಿಜ್ಞೆಮಾಡಿದ್ದರು. ಅರಸರು ಸಿಟ್ಟಿಗೇಳಬಾರದೆಂದು ಈ ಹಂಚಿಕೆಗಳನ್ನು ಮಾಡಿತು.

ಮಾಲತಿ – ಅಹೊ, ಈ ಮಾತು ಬಚ್ಚಿಟ್ಟಿದ್ದಿರಲ್ಲವೇ ?

ಮಕರಂದ ಮಾಧವರು-- ದೊಡ್ಡವರ ಆಚರಣೆಗಳ ಉದ್ದೇಶವು ಪರೋಪಕಾರವೇ ಇರುವದರಿಂದ ಅವು ಅಸಂಬದ್ಧ ಕಂಡರೂ ಅವುಗಳ ಮೇಲೆ ನಂಬಿಗೆ ಇಡತಕ್ಕದ್ದು.

ಕಾಮಂದಕಿ-- ಬಾಲಕನೇ

॥ ಪದ ॥

ಮೊದಲು ಮನೋರಥಂ ಜನಿಸಿ ತಿಬ್ಬರ ಪ್ರೇಮವಿವಾಹಮಾಡಲೀ ।
ಗದು ಜರಿಗಿರ್ಪುದೀರ್ವರ ಸುಸಂಚಿತದಿಂ ಮನು ಶಿಷ್ಯಕಷ್ಟದಿಂ ॥
ಚದುರತೆಯಿಂದ ಕಾಂತೆಯನು ನಿನ್ನಯ ಮಿತ್ರನು ಕಂಡುಕೊಂಡನು ।
ಮುದವನು ಬೀರಿತೀ ಕಥೆಯು ನಂದನ ರಾಜಕೊಳಿಬ್ಬರಲ್ಲಿ ಮೇಣ್ ॥೨೪॥

ಇದಕ್ಕಿಂತ ಹೆಚ್ಚಿನದೇನಿರುವದು.

ಮಾಧವ-- (ಆನಂದದಿಂದ) ಇದಕ್ಕೂ ಹೆಚ್ಚಿನದಾ

ದ್ದೇಸಿರುವದು. ಆದರೂ ಈ ಭರತವಾಕ್ಯವಿರಲಿ.

॥ ಶಾರ್ದೂಲವಿಕ್ರೀಡಿತ ॥

ಇಳೆಯೆಲ್ಲಂ ಸುಖದಿಂದೆ ಬಾಳಲಿಸದಾ ಸತ್ ಕೃತ್ಯವಂ ಗೆಯ್

ಗಳಿಯುತ್ತೆಲ್ಲರ ದೋಷವಂ ಮರೆಗುಲೀಗೆಮ್ಮೊಳ್ ಸದಾ ಶಾಂ

ವೊಳ್ಮೆಗಾಂತಿರ್ಗೆ ವಿರೋಧವೀಗಳಿದು ಪ್ರೇಮಂ ಪೆರ್ಚಲಿಮ್ಮೊ

ಬಳಗಂ ತಮ್ಮದು ವಿಶ್ವವೆಂದು ತಿಳಿದೆಲ್ಲರ್ ಬಾಳಲೀ ಲೋಕವೊ

ಕಾಮಂದಕಿ-- ಅದರಂತೆ ಆಗಲಿ.

( ೧೦ನೇ ಅಂಕ ಮುಗಿಯಿತು. )

— ಗ್ರಂಥ ಸಮಾಪ್ತಿ —



